# ಕರ್ನಾಟಕ ಉತ್ಕೃಷ್ಟ ಕಲೆ, ಸಾಹಿತ್ಯ ಸಂಸ್ಕೃತಿ......................ಗಳ ಬೀಡು

ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕದ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಹಿರಿಮೆ ಕನ್ನಡಿಗರದು. ಸಾಮಾಜಿಕ ಸಮಾನತೆ, ಹೃದಯ ವೈಶಾಲ್ಯತೆಯ ಮೂಲ ಸೆಲೆಯಲ್ಲಿ ಮೂಡಿಬಂದ ಈ ನಾಡಿನ ವಚನಸಾಹಿತ್ಯ ಮತ್ತು ದಾಸಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ನೀಡಿದ ಅಭೂತಪೂರ್ವ ಕೊಡುಗೆಗಳು.

ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ, ತಂತ್ರಜ್ಞಾನಗಳಂತಹ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧಗೊಳಿಸಬೇಕೆಂಬುದೇ ಸರ್ಕಾರದ ದೃಢ ಸಂಕಲ್ಪ. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಪ್ರಾಶಸ್ತ್ಯ ನೀಡಿ ಕಾರ್ಯಪ್ರವೃತ್ತವಾಗಿದೆ.



ಕರ್ನಾಟಕ ವಾರ್ತೆ

ನಮ್ಮ ಮಾನಸ

ನವೆಂಬರ್ 2011
ಸಂಪುಟ : 5 ಸಂಚಿಕೆ : 7

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **10–00 ರೂ.** |
| **ವಾರ್ಷಿಕ ಚಂದಾ** | **100–00 ರೂ.** |
| (ವಿಶೇಷ ಸಂಚಿಕೆಯೊಂದಿಗೆ) | |
| **ಸಂಸ್ಥೆಗಳಿಗೆ** | **150–00 ರೂ.** |

ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

ಪ್ರಾರಂಭ : **'ಮಾನುಷಿ'** (1985ರಲ್ಲಿ),
ಅನಂತರ **'ಮಾನಸ'**,
ಈಗ **'ನಮ್ಮ ಮಾನಸ'**



ಸಂಪಾದಕೀಯ

# ಮಹಿಳೆಯರ ಹಕ್ಕುಗಳು ಸಹಜವೆಂಬಂತೆ ಜಾರಿಯಾಗುವುದು ಯಾವಾಗ?

ಮಹಿಳೆಯರ ಆಸ್ತಿ ಹಕ್ಕುಗಳು ಸಂವಿಧಾನದಲ್ಲಿ ಒಂದು ರೂಪ ಪಡೆಯುವಲ್ಲಿ ಅನೇಕ ಮಹಿಳಾ ಹಾಗೂ ಪ್ರಗತಿಪರ ಹೋರಾಟಗಳು ಕಾರಣವಾಗಿವೆ. 1956ರ ಹಿಂದೂ ಸಕ್ಸಶನ್ ಕಾನೂನಿನ ಪ್ರಕಾರ ಆಸ್ತಿ ಹಕ್ಕಿಗೆ ಮಹಿಳೆ ಪುರುಷನಷ್ಟೇ ಸಮಾನ ಅವಕಾಶ ಹೊಂದಿದ್ದರೂ ಭಾರತದಲ್ಲಿ ಇಂದಿಗೂ ಕೂಡಾ ಆಸ್ತಿಯಲ್ಲಿರುವ ಹಕ್ಕುಗಳನ್ನು ಪಡೆಯಲು ಮಹಿಳೆಯರು ಸೆಣಸಾಡಬೇಕಾಗಿರುವುದು ವಿಪರ್ಯಾಸವೇ ಸರಿ. ಜಾಗತೀಕರಣದ ಸಂದರ್ಭದಲ್ಲಿ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆಯ ಕ್ರೂರ ಮುಖಗಳನ್ನು ನೋಡುತ್ತಿದ್ದೇವೆ. ಆಸ್ತಿಯ ವಿಚಾರದಲ್ಲಿ ಎಲ್ಲಾ ಹೆಣ್ಣುಮಕ್ಕಳು ಕಾನೂನು ಬಾಗಿಲು ತಟ್ಟಿದ್ದೇ ಆದರೆ ಕೌಟುಂಬಿಕ ಹಿಂಸೆ ಹೆಚ್ಚಾಗುವುದು ಮಾತ್ರವಲ್ಲ, ಹೆಣ್ಣು ಮಕ್ಕಳ ಕೊಲೆಗಳು ಕೂಡಾ ಸಾಮಾನ್ಯವಗಿಬಿಡುತ್ತವೆ ಎಂಬುದನ್ನು ಊಹಿಸಬಹುದಾಗಿದೆ.

ಭಾರತದಲ್ಲಿ ಹಿಂದು, ಸಿಕ್, ಬೌದ್ಧರು, ಜೈನರು ಮಾತ್ರ ಹಿಂದೂ ಸಕ್ಸಶನ್ ಕಾನೂನಿನ ಪರಿಮಿತಿಯ ಒಳಗೆ ಬರುತ್ತಾರೆ. ಉಳಿದಂತೆ ಅನೇಕ ಸಮುದಾಯಗಳು ತಮ್ಮ ವೈಯಕ್ತಿಕ ಕಾನೂನಿನ ಒಳಗೇ ಮಹಿಳೆಯರ ಆಸ್ತಿ ಹಕ್ಕುಗಳನ್ನು ನಿರ್ಧರಿಸುತ್ತವೆ. ಕ್ರಿಶ್ಚಿಯನ್ನರು ಒಂದು ಭಿನ್ನ ಆಸ್ತಿ ಹಕ್ಕಿನ ಕೋಡನ್ನು ಹೊಂದಿದ್ದರೆ, ಮುಸ್ಲಿಂರ ಆಸ್ತಿ ಹಕ್ಕುಗಳು ಕ್ರೋಡೀಕರಣಗೊಂಡು ಒಂದು ಕೋಡ್ ಆಗಿ ರೂಪಿತಗೊಂಡಿಲ್ಲ. ವೈಯಕ್ತಿಕ ಕಾನೂನು ಶರಿಯತ್ ಪ್ರಕಾರವೇ ಅವರ ಆಸ್ತಿ ಹಂಚಿಕೆಗಳು ನಡೆಯುತ್ತವೆ. ಆದಿವಾಸಿ ಮಹಿಳೆಯರ ಆಸ್ತಿ ಹಕ್ಕುಗಳು ಅವರ ಬುಡಕಟ್ಟಿನ ಸಂಪ್ರದಾಯ ಹಾಗೂ ಕಟ್ಟಳೆಯನ್ನು ಅವಲಂಬಿಸಿರುತ್ತವೆ. ಹೀಗಾಗಿ ಭಾರತದಲ್ಲಿ ಮಹಿಳೆಯ ಆಸ್ತಿ ಹಕ್ಕಿನ ಸಂಬಂಧವನ್ನು ಆಕೆಯ ಧರ್ಮ, ಆಕೆಯ ಪ್ರಾಂತ, ಆಕೆ ಒಂಟಿಯೋ, ವಿಧವೆಯೋ, ಮದುವೆಯಾದವಳೋ, ಅಲ್ಲವೋ ಹೀಗೆ ಅನೇಕ ವಿಚಾರಗಳಿಂದ ನಿರ್ಧರಿಸಲಾಗುತ್ತದೆ. ಯಾಕೆಂದರೆ, ಭಾರತದ ಸಂವಿಧಾನದ ಪ್ರಕಾರ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಕಾನೂನು ಸುಧಾರಣೆ ತರುವ ಅವಕಾಶ ಹೊಂದಿರುವುದರಿಂದ ಹಲವಾರು ರಾಜ್ಯ ಸರ್ಕಾರಗಳು ತಮ್ಮದೇ ಆದ ಬದಲಾವಣೆ ತಂದಿವೆ. ಉದಾಹರಣೆಗೆ, 2005ರಲ್ಲಿ ಹಿಂದೂ ಸಕ್ಸಶನ್ ಕಾಯಿದೆ ಸುಧಾರಣೆ ಆಗುವ ಮೊದಲೇ ಕೇರಳ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಕರ್ನಾಟಕದಲ್ಲಿ ಮಗಳಿಗೆ ಮಗನ ಹಾಗೆ ಆಸ್ತಿ ಜನ್ಮಸಿದ್ಧ ಹಕ್ಕು ಎಂಬ ಕಾಯಿದೆಯನ್ನು ಜಾರಿಗೆ ತರಲಾಗಿತ್ತು. 1956ರ ಕಾಯಿದೆಯಲ್ಲಿ ವಿಧವೆಯರಿಗೆ, ಮದುವೆಯಾದ ಹೆಣ್ಣುಮಕ್ಕಳಿಗೆ ಆದ್ಯತೆ ನೀಡಲಾಗಿತ್ತೇ ಹೊರತು, ಸಮಾನವಾದ ಹಕ್ಕು ಮಗಳಿಗೆ ನೀಡಿರಲಿಲ್ಲ. ಮಗನಂತೆ ಮಗಳಿಗೆ ಆಸ್ತಿ ಜನ್ಮಸಿದ್ಧ ಹಕ್ಕಾಗಿರಲಿಲ್ಲ. ಜೊತೆಗೆ ಮನೆ ಭಾಗವಾಗುವ ಸಂದರ್ಭದಲ್ಲಿ ಮಾತ್ರ ಆಕೆ ತನ್ನ ಪಾಲನ್ನು ಕೇಳಬಹುದಿತ್ತೇ ಹೊರತು ಮನೆ ಆಕೆಯ ಹಕ್ಕಾಗಿರಲಿಲ್ಲ.

ಇಂದು ಅನೇಕ ಕಾನೂನುಗಳು ಹೆಂಗಸರ ಪರವಾಗಿದ್ದರೂ ಇಂದಿಗೂ ಕೂಡಾ ಆಸ್ತಿ ಹಕ್ಕಿನ ವಿಚಾರದಲ್ಲಿ ಮಹಿಳೆಯರ ಧ್ವನಿ ಮೂಲೆಗುಂಪಾಗಿ, ಪಿತೃಪ್ರಧಾನ ಮೌಲ್ಯಗಳೇ ರಾರಾಜಿಸುತ್ತಿರುವುದನ್ನು ಕಾಣಬಹುದಾಗಿದೆ. ಬುಡಕಟ್ಟು ಸಮುದಾಯದಲ್ಲಿ ಭೂಮಿ ಒಡೆತನಕ್ಕೆ, ಆಸ್ತಿಗೆ ಸಂಬಂಧಿಸಿದಂತೆ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯದ ವಿರುದ್ಧ ಮಹಿಳಾ ಹೋರಾಟಗಾರರಾದ ಮಧುಕೀಶ್ವರ್ ಹಾಗೂ ಇತರರು ಬಿಹಾರ ರಾಜ್ಯದ ವಿರುದ್ಧ ಸಾರ್ವಜನಿಕ ಹಿತಾಸಕ್ತಿ ಅಡಿಯಲ್ಲಿ ಮೊಕದ್ದಮೆ ಹೂಡಿದ್ದರು. ಸಮುದಾಯದಲ್ಲಿ ಜಾರಿಯಲ್ಲಿದ್ದ ಸಾಂಪ್ರದಾಯಿಕ ಕಾಯಿದೆಗಳು ಮಹಿಳೆಯರು ಭೂಮಿ ಅಥವಾ ಇತರೇ ಆಸ್ತಿ ಹಕ್ಕು ಹೊಂದುವುದನ್ನು ನಿಷೇಧಿಸುತ್ತವೆ. ಜೊತೆಗೆ, ಬುಡಕಟ್ಟು ಮಹಿಳೆಯರು ವ್ಯವಸಾಯ ಹಾಗೂ ಕುಟುಂಬದ ನಿರ್ವಹಣೆಯಲ್ಲಿ ಪುರುಷರಿಗೆ ಸಮಾನವಾಗಿ ದುಡಿಯುವುದನ್ನು

ಗುರುತಿಸುವುದಕ್ಕಾದರೂ ಅವರಿಗೆ ಭೂಮಿ ಹಕ್ಕನ್ನು ನೀಡಬೇಕೆಂಬುದು ಮಹಿಳಾ ಹೋರಾಟಗಾರರ ವಾದವಾಗಿತ್ತು. ಬುಡಕಟ್ಟು ಜನಾಂಗದವರಲ್ಲದವರ ಜೊತೆ ಸಂಬಂಧ ಇರಿಸಿಕೊಂಡ ಕಾರಣಕ್ಕಾಗಿ ಮದುವೆಯಾದ ಅಥವಾ ಆಗದ ಹೆಣ್ಣು ಮಕ್ಕಳು ಆಸ್ತಿಯಿಂದ ವಂಚಿತರಾದ ಹಲವಾರು ಪ್ರಕರಣಗಳು ಇದ್ದವು. ಈ ಮಹಿಳೆಯರಿಗೆ ಆಸ್ತಿ ಬಿಟ್ಟುಬಿಡುವಂತೆ ಒತ್ತಾಯಿಸಲಾಗುತ್ತಿತ್ತು. ಅವರ ಮೇಲೆ ಹಲ್ಲೆ ನಡೆಸಲಾಗುತ್ತಿತ್ತು. ಅಥವಾ ಕೊಂದುಬಿಡಲಾಗುತ್ತಿತ್ತು. ಲಿಂಗ ಸಮಾನತೆಯ ಆಧಾರದಲ್ಲಿ ಈ ಮಹಿಳೆಯರಿಗೆ ನ್ಯಾಯ ದೊರಕಿಸುವಂತೆ, ಸಂವಿಧಾನದಲ್ಲಿರುವಂತೆ ಇವರಿಗೆ ಆಸ್ತಿ ಹಕ್ಕು ನೀಡುವಂತೆ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆ ಹೂಡಿದ ಮಧುಕಿಶೋರ್ ಹಾಗೂ ಇತರರು ಸಮುದಾಯದಲ್ಲಿ ಜಾರಿಯಲ್ಲಿದ್ದ ಸಾಂಪ್ರದಾಯಿಕ ಕಾನೂನುಗಳಿಗೆ ಸವಾಲು ಒಡ್ಡಿ ಸುಪ್ರೀಂ ಕೋರ್ಟ್ ಮೊರೆ ಹೋಗಿದ್ದರು. ಈ ಪ್ರಕರಣದಲ್ಲಿ ನ್ಯಾಯಾಲಯವು ನೀಡಿದ ತೀರ್ಪು ಅತ್ಯಂತ ಗುರುತರವಾದುದು. ಸಾಂಪ್ರದಾಯಿಕ ಕಾನೂನುಗಳು ಸಮಯಕ್ಕೆ ತಕ್ಕಂತೆ ಬದಲಾಗಬೇಕಾದ ಅಗತ್ಯವನ್ನು ಎತ್ತಿ ಹಿಡಿದ ನ್ಯಾಯಾಲಯ ಪ್ರತಿವಾದಿಗಳ ನಿಲುವುಗಳನ್ನು ತಳ್ಳಿ ಹಾಕಿತ್ತು. ಭೂಮಿ ಹಂಚಿ ಚೂರಾಗುವುದು, ಬುಡಕಟ್ಟು ಜನಾಂಗದಲ್ಲದವರು ಸಮುದಾಯದೊಳಗೆ ಪ್ರವೇಶಿಸುವುದು ಇಂತಹ ವಾದಗಳಿಗೆ ಮಣೆ ಹಾಕದ ನ್ಯಾಯಾಲಯ ಬುಡಕಟ್ಟು ಮಹಿಳೆಯರ ಭೂಮಿಹಕ್ಕನ್ನು ಎತ್ತಿ ಹಿಡಿದಿತ್ತು.

ಬುಡಕಟ್ಟು ಹಾಗೂ ಗ್ರಾಮೀಣಪ್ರದೇಶಗಳಲ್ಲಿ ಭೂಮಿ ಎನ್ನುವುದು ಒಂದು ಕೆಲಸವಿದ್ದ ಹಾಗೆ, ಒಂದು ಮನೆ ಇದ್ದ ಹಾಗೆ, ಒಂದು ರೀತಿಯ ಸಾಮಾಜಿಕ ಭದ್ರತೆ ಇದ್ದ ಹಾಗೆ. ಉಳುವುದಕ್ಕೆ, ಸಾಲ ಪಡೆಯುವುದಕ್ಕೆ, ಬದುಕಿನ ಭರವಸೆಗೆ ಮಹಿಳೆಯರಿಗೆ ಭೂಮಿಯ ಹಕ್ಕು ಒಂದು ಆಶಾಕಿರಣವಾಗಿದೆ. ಈ ಹಕ್ಕಿನಿಂದಾಗಿ ಮಹಿಳೆಯರಿಗೆ ಆಹಾರದ ಭದ್ರತೆ ಇರುವುದಲ್ಲದೇ ಕುಟುಂಬದ ಆರ್ಥಿಕ ಸ್ಥಿತಿಯೂ ಸುಗಮವಾಗಿರುತ್ತದೆ. ಮನೆಯವರ ಆರೋಗ್ಯ ಹಾಗೂ ವಿದ್ಯಾಭ್ಯಾಸಗಳಿಗೂ ಕೂಡಾ ಗಮನ ಹರಿಸಲು ಮಹಿಳೆಯರಿಗೆ ಸಾಧ್ಯವಾಗುತ್ತದೆ. ಜೊತೆಗೆ ಅವರ ಬಗ್ಗೆ ಅವರಿಗೇ ಒಂದು ಭರವಸೆ ಇರುತ್ತದೆ.

ವಿಧವೆಯರಿಗೆ ಮಂಗಳ ಕಾರ್ಯದಲ್ಲಿ ಭಾಗವಹಿಸುವಂತೆ ಮಾಡಿದ ಕಾರ್ಯಕ್ರಮಗಳು ಇತ್ತೀಚೆಗೆ ಅತ್ಯಂತ ಪ್ರಚಾರ ಪಡೆದದ್ದನ್ನು ನಾವು ಮಾಧ್ಯಮದಲ್ಲಿ ಗಮನಿಸಿದ್ದೇವೆ. ಪುಟ್ಟ ವಿಧವೆಯರಿಗೆ ಆಸ್ತಿ ನೀಡಬೇಕಾಗುತ್ತದೆ ಎಂಬ ಕಾರಣಕ್ಕೆ ಕಾಶಿಗೆ ಅವರನ್ನು ಕಣ್ಣುಕಟ್ಟಿ ಬಿಟ್ಟಿರುವ ಇತಿಹಾಸವಿರುವ ನಮ್ಮ ದೇಶದಲ್ಲಿ ಮಂಗಳಕಾರ್ಯದಲ್ಲಿ ಅವರನ್ನು ತೊಡಗುವಂತೆ ಮಾಡುವುದು ಅತ್ಯಂತ ಮೂಲಭೂತ ಬದಲಾವಣೆಯನ್ನು ತರುತ್ತದೆ ಎಂದು ಭಾವಿಸಬೇಕಾಗಿಲ್ಲ. ಅವರು ಬದುಕಿ ಉಳಿಯಲಿಕ್ಕೆ ಸಿಗುವ ಆರ್ಥಿಕ ಆಧಾರದ ಭದ್ರತೆ, ಹಾಗೂ ಜೀವನವನ್ನು ಮರುರೂಪಿಸಿಕೊಳ್ಳುವ ಅವರ ಹಂಬಲಕ್ಕೆ ನೆರವಾಗಬಹುದಾದ ಮೌಲ್ಯಗಳು ನೆಲೆಗೊಂಡಾಗ ಮಾತ್ರ ಒಂದು ಜೀವನ್ಮಖಿಯಾದ ಬದಲಾವಣೆಯ ಗಾಳಿ ವಿಧವೆಯರ ಬದುಕಿನಲ್ಲಿ ಬೀಸಬಹುದು. ಆಸ್ತಿಯ ವಿಚಾರ ಬಂದಾಗ ಕೌಟುಂಬಿಕ ದೌರ್ಜನ್ಯಗಳು, ಹಿಂಸೆಯನ್ನು ಎದುರಿಸಿಯೇ ವಿವಿಧ ಸ್ತರದ ಮಹಿಳೆಯರು ನ್ಯಾಯಕ್ಕಾಗಿ ಕಾನೂನಿನ ಮೂಲಕ ಹೋರಾಟ ನಡೆಸಬೇಕಾಗಿದೆ. ಆಸ್ತಿಯ ಹಕ್ಕು ಕೊಡದಿರುವುದಕ್ಕೆ ವರದಕ್ಷಿಣೆ ಹಾಗೂ ತವರು ಮನೆಯಿಂದ ಕೊಡುವ ಒಡವೆ, ಮದುವೆ ಖರ್ಚುಗಳನ್ನು ಲೆಕ್ಕ ಹಾಕಲಾಗುತ್ತದೆ. ಆದರೆ ಆಸ್ತಿಯಲ್ಲಿ ಸಮಪಾಲು ಸಿಗುವುದು ಸರಿಯಾದ ರೀತಿಯಲ್ಲಿ ಜಾರಿಯಾದರೆ, ಈಗಿರುವ ವರದಕ್ಷಿಣೆ ಹಾಗೂ ಇತರ ಖರ್ಚುಗಳು ಹಾಗೂ ಹೆಣ್ಣು ಮಕ್ಕಳ ವಿವಾಹ ವ್ಯಾಖ್ಯಾನವೇ ಬೇರೆ ರೀತಿಯಾದ ಅರ್ಥ ಪಡೆಯಬಹುದಾಗಿದೆ. ಮಹಿಳೆಯರ ನಿಜವಾದ ಸಬಲೀಕರಣಕ್ಕೆ ಮಹಿಳೆಯರ 'ಆಸ್ತಿಯ ಹಕ್ಕು' ದಾರಿಮಾಡಿ ಕೊಡಬಹುದಾಗಿದೆ.

1956ರ ಹಿಂದೂ ಸೆಕ್ಷನ್ ಕಾಯಿದೆಯ ಕಾಲಂ 15ರ ಬದಲಾವಣೆಗೆ ಈಗಾಗಲೇ ಒತ್ತಾಯಗಳು ಮೂಡಿ ಬರುತ್ತಿವೆ. ನ್ಯೂಕ್ಲಿಯರ್ ಕುಟುಂಬಗಳು ಹೆಚ್ಚಾಗುತ್ತಿರುವ ಇಂದಿನ ಸಂದರ್ಭದಲ್ಲಿ ಮಹಿಳೆಯರು ತವರು ಮನೆಯವರಿಗೆ ಹೆಚ್ಚು ಹೆಚ್ಚು ಅವಲಂಬಿತರಾಗುತ್ತಿರುವುದು ವಾಸ್ತವ. ಹಾಗಾಗಿ ಮಕ್ಕಳು, ಗಂಡ ಇಲ್ಲದೇ ಇರುವ ಮಹಿಳೆ ವಿಲ್ ಬರೆಯದೇ ಸಾವನ್ನಪ್ಪಿದ ಸಂದರ್ಭದಲ್ಲಿ ಆ ಆಸ್ತಿ ಈಗಿರುವ ಕಾನೂನಿನ ಪ್ರಕಾರ ಗಂಡನ ಮನೆಯವರಿಗೆ ಸೇರುತ್ತದೆ. ಆದರೆ ಈಗ ಆಕೆ ತವರು ಮನೆಯಿಂದ ಆಸ್ತಿ ಹಾಗೂ ಇತರ ಬಳುವಳಿ ಪಡೆಯುವುದರಿಂದ ಗಂಡ, ಮಕ್ಕಳಿಲ್ಲದ ಮಹಿಳೆ ವಿಲ್ ಬರೆಯದೇ ಸತ್ತಾಗ ಆ ಆಸ್ತಿಯಲ್ಲಿ ಸಮಪಾಲನ್ನು ಪಡೆಯಲು ಗಂಡನ ಹಾಗೂ ತವರು ಮನೆಯವರು ಇಬ್ಬರೂ ಅರ್ಹರಾಗಿರುತ್ತಾರೆ ಎಂದು 15ರ ಕಾಲಂಗೆ ಬದಲಾವಣೆ ತಂದಾಗ ಮಾತ್ರ ಸಾಧ್ಯವಾಗುತ್ತದೆ. ಹೀಗೆ ಬದಲಾವಣೆ ತರಬೇಕೆಂದು ಈಗಾಗಲೇ ಹಲವು ಕಾನೂನು ತಜ್ಞರು ಶಿಫಾರಸ್ಸು ಮಾಡಿದ್ದಾರೆ. ಕಾಲ ಬದಲಾದ ಹಾಗೆ ಕಾನೂನುಗಳು ಬದಲಾಗಬೇಕು. ಕಾನೂನುಗಳಲ್ಲಿರುವ ಮಹಿಳೆಯರ ಹಕ್ಕುಗಳು ಸಹಜವೆಂಬಂತೆ ಜಾರಿಯಾಗಬೇಕು. ಹಾಗಿಲ್ಲದಿದ್ದಾಗ ಕೌಟುಂಬಿಕ ಹಿಂಸೆ, ದೌರ್ಜನ್ಯಗಳನ್ನು ಲೆಕ್ಕಿಸದೇ, ಹೋರಾಟಗಳ ಮೂಲಕವೇ ಆಸ್ತಿ ಹಕ್ಕು ಪಡೆದು ಬದುಕುಳಿಯುವ ಪ್ರಯತ್ನಗಳು ಮಹಿಳೆಯರಿಂದ ನಡೆಯುತ್ತಲೇ ಇರುತ್ತವೆ. ●

## ಒಳಗಿನ ಪುಟಗಳಲ್ಲಿ....



ಹಾಲಕ್ಕಿ ಒಕ್ಕಲಿಗರು ಲೇಖನದ ಛಾಯಾಚಿತ್ರಗಳು: ಶ್ರೀಪಾದ ಹೆಗಡೆ

### ಓದುಗರಲ್ಲಿ ಮನವಿ

ಜಾಗತೀಕರಣದ ಇಂದಿನ ಸಂದರ್ಭದಲ್ಲಿ 'ನಮ್ಮ ಮಾನಸ'ದಂತಹ ಸಣ್ಣ ಪತ್ರಿಕೆಗೆ ಓದುಗರೇ ಜೀವಾಳ. ಪತ್ರಿಕೆಗೆ ಚಂದಾದಾರರಾಗುವ ಮೂಲಕ ಹಾಗೂ ಈ ವರ್ಷದ ಚಂದಾ ನವೀಕರಿಸುವ ಮೂಲಕ ಪತ್ರಿಕೆಯ ಪ್ರಕಟಣೆಗೆ ಸಹಕಾರ ನೀಡಿ.







# ಕಮಲಾ ಮಾರ್ಕಂಡೇಯ ಅವರ ಕಾದಂಬರಿಗಳ ಮಹಿಳಾ ಲೋಕ

■ ಗಿರಿಜಾಶಾಸ್ತ್ರಿ

ಕಮಲಾ ಮಾರ್ಕಂಡೇಯ ಸ್ವಾತಂತ್ರ್ಯೋತ್ತರ ಭಾರತ ಕಂಡ ಕೆಲವೇ ಭಾರತೀಯ ಆಂಗ್ಲ ಕಾದಂಬರಿಕಾರ್ತಿಯರಲ್ಲಿ ಬಹಳ ಪ್ರಮುಖರು. ಮಹಿಳಾ ಸಂವೇದನೆ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಎಚ್ಚರಗೊಳ್ಳುತ್ತಿರುವ ಸ್ಥಿತಿಯ ಪೂರ್ಣರೂಪ ವನ್ನು ಅವರ ಕಾದಂಬರಿಗಳು ಅವರ ಸಮಕಾಲೀನ ಲೇಖಕಿಯರಿಗಿಂತ ಪರಿಣಾಮ ಕಾರಿಯಾಗಿ ಅಭಿವ್ಯಕ್ತಿಸುತ್ತವೆ. ಸ್ವಾತಂತ್ರ್ಯೋತ್ತರ ಸಾಂಪ್ರದಾಯಿಕ ಸಮಾಜವು ಎದುರಿಸಿದ ರಾಜಕೀಯ, ಸಾಮಾಜಿಕ, ಆರ್ಥಿಕ ಮೌಲ್ಯಗಳ ಸ್ಥಿತ್ಯಂತರವನ್ನು ಸಹಜವಾಗಿಯೇ ಅವರ ಕಾದಂಬರಿಗಳು ಹಿಡಿದಿಡುತ್ತವೆ. ಹೀಗಾಗಿ ಪೂರ್ವ ಪಶ್ಚಿಮಗಳ ಸಾಂಸ್ಕೃತಿಕ ಮುಖಾಮುಖಿ, ಸಾಂಪ್ರದಾಯಿಕ ಹಾಗೂ ಆಧುನಿಕತೆಯ ನಡುವೆ ಅಂದಿನ ಸಮಾಜ ಅನುಭವಿಸಿದ ಇಬ್ಬಂದಿತನವನ್ನು ಸೆರೆಹಿಡಿಯುವುದು ಇವರ ಕೃತಿಗಳ ಮುಖ್ಯ ಆಶಯವಾಗಿದೆ. ಇಂತಹ ಸಾಮಾಜಿಕ ಸಂದರ್ಭಗಳು ಮಹಿಳೆಯರ ಮಾನಸಿಕ ಸ್ಥಿತಿಯ ಮೇಲೆ ಉಂಟು ಮಾಡಿದ ಪರಿಣಾಮವನ್ನು ಅವು ಅನನ್ಯವಾಗಿ ಚಿತ್ರಿಸುತ್ತವೆ. ಗ್ರಾಮೀಣ ಮಹಿಳೆಯರಿಂದ ಹಿಡಿದು, ಮಧ್ಯಮವರ್ಗ, ಉಚ್ಚವರ್ಗಕ್ಕೆ ಸೇರಿದವರು, ಉದ್ಯೋಗಸ್ಥರು, ಸುಶಿಕ್ಷಿತರು, ಅನಕ್ಷರಸ್ಥರು ಹೀಗೆ ಸಮಾಜದ ವಿವಿಧ ಸ್ಥರದ ಮಹಿಳೆಯರು ಇವರ ಕಾದಂಬರಿಗಳ ಕೇಂದ್ರ ಪಾತ್ರಗಳಾಗಿವೆ. ಆರ್ಥಿಕ ಸಮಸ್ಯೆ, ಸಾಮಾಜಿಕ ಅವ್ಯವಸ್ಥೆ ಇವುಗಳ ಕಾರಣದಿಂದಾಗಿ ಅನೇಕ ಕೋಟಲೆಗಳನ್ನು ಎದುರಿಸುವ ಇಲ್ಲಿನ ಮಹಿಳೆಯರ ಹೋರಾಟದ ಸ್ವರೂಪವು ಬಿಡುಗಡೆಗಾಗಿ ಅವರು ನಡೆಸುವ ಆಂತರಿಕ ಶೋಧವಾಗಿದೆ. ಹೋರಾಟದ ಅನುಭವವೇ ಅವರ ವ್ಯಕ್ತಿತ್ವವನ್ನು ಮಾಗಿಸಿದೆ. A Nectar in A Sieve (1954), Two Virgins (1973) ಅವರ ಈ ಎರಡೂ ಕಾದಂಬರಿಗಳು ಮಹಿಳೆಯರ ವಿಭಿನ್ನ ಶಕ್ತಿ ಸ್ವರೂಪಗಳನ್ನು ಅವರ ಸ್ವಾತಂತ್ರ್ಯದ ಕಲ್ಪನೆಯನ್ನು ಅತ್ಯಂತ ಪರಿಣಾಮಕಾರಿ ಯಾಗಿ ವ್ಯಕ್ತಪಡಿಸುತ್ತವೆ. A Nectar in A Sieve ಕಾದಂಬರಿಯ ನಾಯಕಿ ರುಕ್ಮಿಣಿ "ಪುಳಿ" ಎನ್ನುವ ಹಳ್ಳಿಯ ನಾಥನ್ ಎನ್ನುವವನನ್ನು ಮದುವೆ ಯಾಗುವುದರ ಮೂಲಕ ಕಷ್ಟಗಳ ಸರಮಾಲೆಯನ್ನು ಕಟ್ಟಿಕೊಳ್ಳುತ್ತಾಳೆ. ರುಕ್ಮಿಣಿಯ ಕಥೆ ಅಥವಾ ಈ ಕಾದಂಬರಿ ಪ್ರಾರಂಭವಾಗುವುದೇ, ಅವಳು ಮದುವೆ ಯಾಗಿ ಗಂಡನನ್ನು ಹಿಂಬಾಲಿಸಿಕೊಂಡು "ಪುಳಿ"ಗೆ ಕಾಲಿಡುವ ಸಂದರ್ಭದಿಂದ. ಪ್ರಾರಂಭದಲ್ಲಿ ಸ್ವಂತ ಜಮೀನು, ತಾವೇ ಕಟ್ಟಿಕೊಂಡ ಮೋಹದ ಮನೆ ಈ ಎಲ್ಲವುಗಳಿಂದ ರುಕ್ಮಿಣಿಯ ಬಾಳು ಸುಖವಾಗಿರುತ್ತದೆ. ಆದರೆ ಇಂತಹ ಸುಖೀಸಂಸಾರದ ಹಳ್ಳಿಗೆ ಕ್ರಮೇಣ ನಗರ ಪ್ರವೇಶವಾಗುತ್ತದೆ. ಚರ್ಮ ಹದಮಾಡುವ ಕಾರ್ಖಾನೆಯೊಂದು ಪ್ರಾರಂಭವಾಗುವುದರಿಂದ ಇಡೀ ಹಳ್ಳಿಯ ಆರ್ಥಿಕ, ಸಾಮಾಜಿಕ ಬದುಕು ಪಲ್ಲಟ ಗೊಳ್ಳುತ್ತದೆ. ಆ ಹಳ್ಳಿಯ ಮನಶ್ಶಾಂತಿಗೆ ಭಂಗತರುತ್ತದೆ. ಜೊತೆಗೆ ನೆರೆ ಹಾವಳಿ, ಬರ ಇತ್ಯಾದಿ ಪ್ರಾಕೃತಿಕ ವಿಕೋಪಗಳಿಂದಲೂ ಜನಜೀವನ ದುಸ್ತರವಾಗುತ್ತದೆ. ರುಕ್ಮಿಣಿಯ ಇಬ್ಬರು ಗಂಡು ಮಕ್ಕಳು ಚರ್ಮ ಹದಮಾಡುವ ಕಾರ್ಖಾನೆಗೆ ಸೇರಿಕೊಳ್ಳುತ್ತಾರೆ. ಆನಂತರ ಅವರು ಊರನ್ನು ಬಿಟ್ಟು ಸಿಲೋನಿಗೆ ಹೋಗುತ್ತಾರೆ, ಮೂರನೆಯ ಮಗ ನೌಕರಿ ಹುಡುಕಿಕೊಂಡು ಮನೆಬಿಟ್ಟು ಹೋದವನು ವಾಪಸ್ಸು ಬರುವುದೇ ಇಲ್ಲ. ನಾಥನ್ ದಂಪತಿಗಳು ತಮ್ಮ ಜಮೀನನ್ನು ಕಳೆದುಕೊಳ್ಳಬೇಕಾಗುತ್ತದೆ. ಮಗಳು ಇಳಾ ಬಂಜೆಯೆಂಬ ಶಾಪಹೊತ್ತು ತವರಿಗೆ ಮರಳಿದವಳು ಹೊಟ್ಟೆಗಿಲ್ಲದೆ ನರಳುವ ತನ್ನ ರೋಗಿಷ್ಟ ತಮ್ಮನಿಗಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸಬೇಕಾಗುತ್ತದೆ. ಹೊಟ್ಟೆಪಾಡಿಗಾಗಿ ರುಕ್ಮಿಣಿ ಮತ್ತು ನಾಥನ್ ಊರುಬಿಟ್ಟು ನಗರಕ್ಕೆ ಬಂದು, ಅಲ್ಲಿ ಕಲ್ಲುಕುಟಿಕರಾಗಿ ಕೆಲಸ ಆರಂಭಿಸುತ್ತಾರೆ. ಅಲ್ಲಿ ಓಡಿಹೋದ ಮಗನನ್ನು ಹುಡುಕುವುದರಲ್ಲಿ ನಗರದ ವಂಚನೆಗೆ ಬಲಿಯಾಗುವ ಅವರು ಇರುವುದನ್ನೆಲ್ಲ ಕಳೆದುಕೊಳ್ಳಬೇಕಾಗುತ್ತದೆ. ಹಳ್ಳಿಗೆ ಮರಳಬೇಕೆಂಬ ಕನಸಿನಲ್ಲಿಯೇ ಕೆಲಸದ ಒತ್ತಡ ತಾಳಲಾರದೇ ನಾಥನ್ ಅಸುನೀಗುತ್ತಾನೆ. ರುಕ್ಮಿಣಿ ಕುಷ್ಠರೋಗಿಯೊಬ್ಬನನ್ನು ದತ್ತು ತೆಗೆದುಕೊಂಡು ಊರಿಗೆ ಮರಳುತ್ತಾಳೆ. ಅಲ್ಲಿ ಒಮ್ಮೆ ಅವಳಿಗೆ ಮಕ್ಕಳಾಗುವುದಕ್ಕೆಂದು ಔಷಧೋಪಚಾರಮಾಡಿದ ಕ್ರಿಶ್ಚಿಯನ್ ವೈದ್ಯ ಕೆನ್ನಿಂಗ್‌ಟನ್‌ನ ದವಾಖಾನೆಯಲ್ಲಿ ರೋಗಿಗಳ ಸೇವೆಗೆಂದು ಆಯಾಳಾಗಿ ಕೆಲಸಕ್ಕೆ ಸೇರಿ ಕೊಳ್ಳುತ್ತಾಳೆ.

ರುಕ್ಮಿಣಿಯ ತಾಳಿಕೆಗುಣದ ಪರಾಕಾಷ್ಠೆ ಈ ಕಾದಂಬರಿಯಲ್ಲಿದೆ. ಇಪ್ಪತ್ತು ವರುಷಗಳಷ್ಟು ಹಿಂದಿನ ಓದಿನ ಬೆಳಕಲ್ಲಿಟ್ಟು ನೋಡುವಾಗ ಈ ಕಾದಂಬರಿ ಹೆಣ್ಣಿನ ಪಾರಂಪರಿಕ ಮೌಲ್ಯಗಳನ್ನೇ ಸಾರುತ್ತದೆ ಎಂಬ

ಕಾರಣಕ್ಕಾಗಿ ಸ್ತ್ರೀವಾದಿ ಅಧ್ಯಯನದ ನೆಲೆಯಲ್ಲಿ ಈ ಕಾದಂಬರಿ ಅಂತಹ ಮಹತ್ವದ ಸ್ಥಾನವನ್ನು ಪಡೆದುಕೊಳ್ಳುವುದಿಲ್ಲ. ಆದರೆ ಈಗ ಸ್ತ್ರೀವಾದದ ಪರಿಕಲ್ಪನೆಗಳು ಬದಲಾದ ಹೊತ್ತಿನಲ್ಲಿ ಹಾಗೂ ಸಾಹಿತ್ಯದ ಅಧ್ಯಯನವೆನ್ನುವುದು ಸೈದ್ಧಾಂತಿಕ ಅಧ್ಯಯನದ ನೆಲೆಯಿಂದ ಸಾಂಸ್ಕೃತಿಕ ನೆಲೆಗೆ ವರ್ಗಾವಣೆಗೊಂಡಿರುವ ಈ ಹೊತ್ತಿನಲ್ಲಿ ಈ ಕಾದಂಬರಿಯ ಮರುಓದು ಮಹಿಳೆಯ ವಿಶಿಷ್ಟಶಕ್ತಿಯ ಮೇಲೆ ಬೆಳಕು ಚೆಲ್ಲುತ್ತದೆ. ನೋವನ್ನು ಧರಿಸುವ ಸ್ವೀಕರಿಸುವ ಶಕ್ತಿ, ಬದುಕಿನ ಕಷ್ಟ ಪರಂಪರೆಗಳನ್ನು ಎದುರಿಸುವ ಧೈರ್ಯ, ಅದರ ನಿವಾರಣೆಗಾಗಿ ಕಂಡು ಕೊಳ್ಳುವ ಉಪಾಯಗಳು ಈ ಎಲ್ಲದರ ಒಟ್ಟು ಮೊತ್ತವಾಗಿ ರುಕ್ಮಿಣಿ ರೂಪು ಗೊಳ್ಳುತ್ತಾಳೆ. ಗಂಡ ಸೋತು ನೆಲಕಚ್ಚುವಾಗ ಅವನಿಗೆ ಧೈರ್ಯ ತುಂಬುವವಳೂ ಅವಳೇ. ಭರವಸೆಗಳ ಎಲ್ಲ ಸಾಧ್ಯತೆಗಳೂ ಅಳಿಸಿ ಹೋಗಿರುವಾಗಲೂ ಅವಳು ಗಂಡನಿಗೆ "Have we not been happy together? Always, my dearest always" (Pp110) ಎಂದು ಬದುಕುವ ಒತ್ತಾಸೆಯನ್ನು ನೀಡುತ್ತಾಳೆ.

ರುಕ್ಮಿಣಿಯ ಪಾತ್ರ ಮೇಲುನೋಟಕ್ಕೆ ಭಾವಾತಿರೇಕವಾಗಿ ಕಂಡರೂ, ಒಬ್ಬ ಬಡತನದ ಬೇಗೆಗೆ ಸಿಕ್ಕಿದ ಅಸಹಾಯಕ ಗ್ರಾಮೀಣ ಮಹಿಳೆಯ ಪ್ರತೀಕವಾಗಿದ್ದಾಳೆ. ಆದರೆ ತನ್ನ ಅಸಹಾಯಕತೆಯನ್ನು ಹೋಗಲಾಡಿಸಲು ಅವಳು ತೋರುವ ಧೈರ್ಯ ಮಾತ್ರ ವಿಶಿಷ್ಟವಾದುದು. ರುಕ್ಮಿಣಿಯ ಮಗಳು ಇಳಾ ಕೂಡ ತನ್ನ ತಮ್ಮನಿಗಾಗಿ ವೇಶ್ಯಾವೃತ್ತಿಯನ್ನು ಒಪ್ಪಿಕೊಳ್ಳುವಾಗ "To night and tomorrow and even night, so long as there is need. I will not hunger any one" ಎನ್ನುತ್ತಾಳೆ. ಇಳಾ ತನ್ನ ಅನೈತಿಕ ಸಂಬಂಧಕ್ಕೆ ಹುಟ್ಟಿದ ಮಗುವನ್ನು ಸಾಕಲು ಮನಸ್ಸು ಮಾಡುವುದರ ಮೂಲಕ ಹೊಸ ಕಷ್ಟಗಳಿಗೆ ಗುರಿಯಾಗುತ್ತಾಳೆ.

ಗಂಡ ಹಾಗೂ ಮಗನ ಸಾವು, ಮಗಳ ಶೋಚನೀಯ ಸ್ಥಿತಿ, ಕುಂತಿಯೆನ್ನುವವಳೊಡನೆ ಗಂಡನ ಅನೈತಿಕಸಂಬಂಧ, ಎಲ್ಲವನ್ನೂ ರುಕ್ಮಿಣಿ ತನ್ನ ದೈವವೆಂದು ಸ್ವೀಕರಿಸುತ್ತಾಳೆ. ಅವಳ ಹೋರಾಟವೆನ್ನುವುದು ಮನುಷ್ಯ ವ್ಯವಸ್ಥೆಯ ವಿರುದ್ಧ ಮಾತ್ರವಲ್ಲ, ದೇವವ್ಯವಸ್ಥೆಯ ವಿರುದ್ಧವಾಗಿಯೂ ಅವಳು ಹೋರಾಡ ಬೇಕಾಗಿದೆ. ಯಾಕೆಂದರೆ ಎಲ್ಲವೂ ತನ್ನ ಹಣೆಬರಹವೆಂದು ಸುಮ್ಮನೆ ಕೈಕಟ್ಟಿ ಕೂರುವುದಿಲ್ಲ. ಬೆಳಕಿನ ಆಸೆಯೇ ಇಲ್ಲದ ಕಡೆ ಕೂಡ ಕತ್ತಲಿನಲ್ಲಿಯೇ ಬೆಳಕಿನ ನಿರೀಕ್ಷೆಯಲ್ಲಿ ಕಾಯುವುದು, ಹೇಗಾದರೂ ಮಾಡಿ ತಾನೂ ಉಳಿಯಬೇಕು ಮತ್ತು ತನ್ನವರನ್ನು ಉಳಿಸಿಕೊಳ್ಳಬೇಕೆಂದು ಎಲ್ಲ ವೈರುಧ್ಯಗಳ ನಡುವೆಯೂ ಹೋರಾಟದ ಉಪಾಯಗಳನ್ನು ರೂಪಿಸಿಕೊಳ್ಳುವುದು, ಈ ಎಲ್ಲವೂ ಅವಳೊಳಗಿನ ಅದಮ್ಯ ಚೈತನ್ಯವನ್ನು, ಬದುಕಿನ ಬಗೆಗೆ ಅವಳಿಗಿರುವ ಸಕಾರಾತ್ಮಕ ದೃಷ್ಟಿಕೋನವನ್ನು ಎತ್ತಿಹಿಡಿಯುತ್ತದೆ. ಅನಕ್ಷರಸ್ಥಳಾದ ಅವಳಿಗೆ ಹೆಣ್ಣಿನ ಪಾರಂಪರಿಕ ಮಾದರಿಗಳನ್ನು ಒಪ್ಪಿಕೊಳ್ಳುವುದರಲ್ಲಿ ಯಾವುದೇ ತಕರಾರುಗಳಿಲ್ಲ. ಅವಳು ಎಲ್ಲ ಭಾರತೀಯ ನಾರಿಯಂತೆ ಕಷ್ಟಗಳನ್ನು ಹೊರಲಿಕ್ಕೆಂದೇ, ನೋವುಗಳನ್ನು ಅನುಭವಿಸಲಿಕ್ಕೆಂದೇ ಹುಟ್ಟಿಬಂದವಳು. ಆದರೂ ಎಲ್ಲಿಯೂ ಅವಳು ಸೋತ ಹೆಣ್ಣಾಗಿ ಕಾಣಿಸಿಕೊಳ್ಳುವುದೇ ಇಲ್ಲ. ಅವಳೊಳಗಿನ ಶಕ್ತಿಯೆಂದರೆ ಭೂಮಿತಾಯಿಯಂತೆ, ಎಷ್ಟೇ ತುಳಿದರೂ ಫೀನಿಕ್ಸ್‌ಹಕ್ಕಿಯಂತೆ ಮರುಚೈತನ್ಯ ಪಡೆದು ಮತ್ತೆ ಮತ್ತೆ ಜೀವಂತಿಕೆಯನ್ನು ಧರಿಸಿ ಪ್ರತ್ಯಕ್ಷವಾಗುತ್ತದೆ. ಆರ್.ಎ.ಸಿಂಗ್ ಅವರು ಅಭಿಪ್ರಾಯ ಪಡುವಂತೆ "Rukmani's spiritual stamina, heroic impulse, love-like simplicity, love for children, tolerance and respect for traditional values make her an outstandings character" (Pp.6 Women's writing in India ; New perspectives Ed; K.V. Surendran(delhi; srup & Sons 2002)

ಗಾಳಿ ಬಂದಾಗ ಗರಿಕೆಯಂತೆ ಬಾಗುವುದನ್ನು ರುಕ್ಮಿಣಿ ಕಲಿತದ್ದರಿಂಲೇ ಅವಳು ನಾಶವಾಗದೇ ಉಳಿಯಲು ಸಾಧ್ಯವಾಗುತ್ತದೆ. ಅವಳ ತಾಳ್ಮೆಯೇ ಅವಳ ಶಕ್ತಿ, ಅವಳ ಚೈತನ್ಯವಾಗಿದೆ.

ಬದುಕಿನಲ್ಲಿ ನೋವು, ಕಷ್ಟಗಳು ಇರುವುದು ಸಹಜ. ಆದರೆ ಅದರಾಚೆಗೆ ಮನುಷ್ಯ ಬೆಳೆಯಬೇಕೆನ್ನುವ ಮಾಸ್ತಿಯವರ ಅಂದಿನ ದೃಷ್ಟಿಕೋನವನ್ನು ಇಂದಿನ ಹೊಸ ಬೆಳಕಿನಲ್ಲಿಟ್ಟು ನೋಡುವಾಗ ಅಂದಿನ ಸಾಹಿತ್ಯ ಚಳವಳಿಯು ಒಂದು ಚಕ್ರೀಯ ಪ್ರಕ್ರಿಯೆಯನ್ನು ಮುಗಿಸಿರುವ ಅನುಭವಕ್ಕೆ ಬರುತ್ತದೆ. ಡಿ.ಆರ್. ನಾಗರಾಜ್ ಅವರು ತಮ್ಮ 'ಸಾಹಿತ್ಯ ಕಥನ' ಕೃತಿಯಲ್ಲಿ ಸ್ತ್ರೀವಾದಿ ಮೀಮಾಂಸೆಯ ಸ್ವರೂಪವನ್ನು ಅರ್ಥೈಸುತ್ತಾ ಫ್ಯೂಕೊನ ಮಾತನ್ನು ಉಲ್ಲೇಖಿಸುತ್ತಾರೆ ಅದೆಂದರೆ, "ಪ್ರಭುತ್ವದ ಈ ಅಧಿಕಾರವೆಂದರೆ ಬಟಾ ಬಯಲು. ಈ ಅಧಿಕಾರದಿಂದ ತಪ್ಪಿಸಿಕೊಳ್ಳಲು ಬಿಲಗಳೇ ಮಾರ್ಗ.. ಆದರೆ ನುರಿತ ಬೇಟೆಗಾರನ ಕೈ ಎಂಥ ಬಿಲಕ್ಕೂ ಕೈಹಾಕಿ ಅಡಗಿ ಕೂತದ್ದನ್ನು ಹಿಡಿಯಬಹುದು" (ಸಾಹಿತ್ಯ ಕಥನ. ಡಿ.ಆರ್. ನಾಗರಾಜ್. ಪು.೧೪೨)

ಶಿಕಾರಿ ಮಾಡುವ ಪ್ರಾಣಿ ಬಳಸುವ ಉಪಾಯಗಳ ಮುಂದೆ ಶಿಕಾರಿಗೆ ಒಳಗಾಗುವ ಪ್ರಾಣಿ ತನ್ನ ಉಳಿವಿಗಾಗಿ ಬಳಸುವ ಉಪಾಯಗಳು ಕಡಿಮೆಯದೇನಲ್ಲ. ಈ ಮುಖಾಮುಖಿಯಲ್ಲಿ ಶಿಕಾರಿಗೆ ಒಳಗಾಗುವ ಪ್ರಾಣಿ ಬಲಿಯಾಗಬಹುದು. ಇಲ್ಲವೆ ಆ ಕ್ಷಣಕ್ಕೆ ತಪ್ಪಿಸಿಕೊಳ್ಳ ಬಹುದು, ಆದರೆ ಉಳಿದ ಪ್ರಾಣಿಗಳಿಗೆ ಅದು ತನ್ನ ಹೋರಾಟದ ಸ್ವರೂಪವನ್ನು ವರ್ಗಾಯಿಸಿ ಹೋಗುತ್ತದೆ, ಎಂಬುದೇ ಮುಖ್ಯವಾಗುತ್ತದೆ.

ಇಲ್ಲಿ ರುಕ್ಮಿಣಿ ಮುಗ್ಧತೆಯಿಂದ ವಿದಗ್ಧಳಾಗಿ ಬೆಳೆಯುವ ಪರಿಯಲ್ಲಿ, ತನ್ನ ಉಳಿವಿಗಾಗಿ ಕಂಡುಕೊಳ್ಳುವ ಅಡಗು ತಾಣಗಳು ಹಾಗೂ ಹೋರಾಟದ ಉಪಾಯಗಳೇ ಮಹತ್ವವಾದುದು. ಸಾಂಸ್ಕೃತಿಕ ಅಧ್ಯಯನ ದೃಷ್ಟಿಯಿಂದ ಸಾಹಿತ್ಯವನ್ನು ಮರು ಓದಿಗೆ ಒಳಪಡಿಸುವುದರಲ್ಲಾಗಲೀ, ಮಹಿಳಾಸಾಹಿತ್ಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ರಚಿಸುವುದರಲ್ಲಾಗಲೀ ಇಂತಹ ಚಿಂತನೆಗಳೇ ಅವುಗಳ ಬುನಾದಿಯನ್ನು ರೂಪಿಸಬಲ್ಲವು.

ರುಕ್ಮಿಣಿಯಂತಹ ಮಹಿಳೆಯರು ತಮ್ಮ ತಾಖತ್ತನ್ನು ಮುಂದಿನ ಜನಾಂಗಕ್ಕೆ ಹಸ್ತಾಂತರಿಸಿ ಹೋಗುತ್ತಾರೆ. ಆದರೆ ಬೆಳಕಿಗೆ ಬರದ ಇವು ಸಾಂಸ್ಕೃತಿಕ ಅಪವ್ಯಾಖ್ಯಾನಗಳಿಗೂ ಒಳಗಾಗಿ ಮುಂದಿನ ಜನಾಂಗಕ್ಕೆ ತಪ್ಪು ಸೂಚನೆಗಳನ್ನು ಒಯ್ಯುತ್ತವೆ. ಆದುದರಿಂದಲೇ ಆಧುನಿಕತೆಯ ಹೊಸ್ತಿಲಿನಲ್ಲಿ ನಿಂತ ಹೊಸಜನಾಂಗಕ್ಕೆ ಹಳೆ ತಲೆಮಾರಿನವರ ಶಕ್ತಿಯೇ ದೌರ್ಬಲ್ಯದ ಪ್ರತೀಕವಾಗಿ ಕಾಣಬಹುದು. ಹಳೆತಲೆಮಾರಿನವರ ಬಗ್ಗೆ ಅವಜ್ಞೆ ಹಾಗೂ ಅಜ್ಞಾನ ಒಂದು ಕಡೆಗಿದ್ದರೆ, ಇನ್ನೊಂದು ಕಡೆಗೆ ಬದಲಾದ ಸಂದರ್ಭದಲ್ಲಿ ಹೋರಾಟದ ಹೊಸ ಉಪಾಯಗಳನ್ನು ಕಂಡುಕೊಳ್ಳುವುದರಲ್ಲಿ ಅಸಫಲತೆ ಈ ಎರಡೂ ಕೂಡಿ ಹೊಸ ಜನಾಂಗ ಗೊಂದಲಕ್ಕೆ ಬೀಳಬಹುದು. ಇಂತಹ ಸಾಂಪ್ರದಾಯಿಕತೆ ಹಾಗೂ ಆಧುನಿಕತೆಯ ಬಗೆಗಿನ ಸಂಘರ್ಷವನ್ನು, ಗೊಂದಲಗಳನ್ನು ಕಮಲಾ ಮಾರ್ಕಂಡೇಯ ಅವರ Two Virgins (1973) ಕಾದಂಬರಿ ವಿಶಿಷ್ಟವಾಗಿ ಕಟ್ಟಿಕೊಡುತ್ತದೆ. ಹೀಗೆ ಮಾಡುವಾಗ ಅದು ತೆರೆದು ತೋರುವ ಮಹಿಳಾ ಲೋಕ ಬೆರಗುಗೊಳಿಸುತ್ತದೆ. ಕನ್ನಡದ ಮಟ್ಟಿಗಂತೂ ಈ ಸ್ವರೂಪದ ಕಾದಂಬರಿಗಳು ಇನ್ನೂ ಬರಬೇಕಾಗಿವೆಯಷ್ಟೆ. ಸರೋಜ

ಎನ್ನುವ ಪುಟ್ಟಹುಡುಗಿಯ ಕಣ್ಣಿನಿಂದ ಹಳ್ಳಿಯ ಸಮಸ್ತ ವ್ಯಾಪಾರಗಳೂ ದಾಖಲಾಗುತ್ತ ಹೋಗುತ್ತವೆ. ಮುಗ್ಧ ಕಣ್ಣಿನಿಂದ ನೋಡುವುದರಿಂದ ಸಾಮಾಜಿಕ ವ್ಯವಸ್ಥೆಯ ಬಗೆಗೆ ಯಾವುದೇ ಪೂರ್ವಾಗ್ರಹ ರಹಿತ ವಸ್ತುನಿಷ್ಠ ನಿರೂಪಣೆ ಸಾಧ್ಯವಾಗುತ್ತದೆ. ಸರೋಜ ಭಾರತೀಯನಾರಿಯರ ಆದರ್ಶದ ಪ್ರತೀಕವಾದರೆ, ಅವಳ ಅಕ್ಕ ಲಲಿತ ಪಾಶ್ಚಾತ್ಯ ಸಂಸ್ಕೃತಿಯ ಆಧುನಿಕತೆಗೆ ಒಲಿದವಳು. ಈ ಇಬ್ಬರು ಹುಡುಗಿಯರ ಮೂಲಕ ಪೂರ್ವ-ಪಶ್ಚಿಮಗಳ ಮುಖಾಮುಖಿಯೊಳಗೆ ಲೇಖಕಿ ಒಲಿಯುವುದು ಪೂರ್ವದ ಕಡೆಗೆ. ಹಾಗೆಂದು ಸರೋಜ ಗೊಡ್ಡು ಸಂಪ್ರದಾಯವಾದಿಯಲ್ಲ. ಎಲ್ಲವನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವ ಬಾಲಕಿಯ ಮನೋಪ್ರಪಂಚದಲ್ಲಿ ಇರುವುದು ಎರಡೇ- ಒಂದು ಮಾನವೀಯ, ಇನ್ನೊಂದು ಅಮಾನವೀಯ. ಇದು ನಮ್ಮ ಸಾಮಾಜಿಕ ನಂಬಿಕೆಗಳ ಎಲ್ಲ ರೀತಿಯ ಪೂರ್ವಾಗ್ರಹಗಳನ್ನು ಬಯಲಾಗಿಸುವಲ್ಲಿ ಯಶಸ್ವಿಯಾಗುತ್ತದೆ.

ಲಲಿತಳ ತಾಯಿ ಹಾಗೂ ಅತ್ತೆ ಅಲಮೇಲು ಸಾಂಪ್ರದಾಯಿಕ ನಿಲುವಿನವರಾದರೆ ಅಪ್ಪ ಪ್ರಗತಿಪರ ನಿಲುವಿನವರು. ಹೀಗಿದ್ದು ಲಲಿತಳ ಅಪ್ಪ-ಅಮ್ಮಂದಿರಲ್ಲಿ ಯಾವುದೇ ಪೈಪೋಟಿಯಿಲ್ಲ. ಈ ವಿರುದ್ಧ ಮೌಲ್ಯಗಳ ಪರಸ್ಪರ ತಿಕ್ಕಾಟದ ನಡುವೆಯೂ ಅಪ್ಪ ಅಮ್ಮಂದಿರಿಗೆ ಹೊಂದಾಣಿಕೆಯ ಬದುಕು ಸಾಧ್ಯವಿದೆ. ಮನೆಯವರೆಲ್ಲರ ವಿರುದ್ಧವಾಗಿ ಲಲಿತಳಿಗೆ ಪಾಶ್ಚಾತ್ಯ ವಿದ್ಯಾಭ್ಯಾಸ ಕೊಡಿಸುತ್ತಾರೆ. ಅವಳು ಶಾಲೆಯಲ್ಲಿ ನೃತ್ಯ ಕಾರ್ಯಕ್ರಮಗಳಲ್ಲಿ ಭಾಗಿಯಾಗುವುದರಲ್ಲಾಗಲೀ, ಗುಪ್ತ ಮತ್ತು ದೇವರಾಜನಂತಹ ಪುರುಷರ ಜೊತೆಯಲ್ಲಿ ಓಡಾಡುವುದರಲ್ಲಾಗಲೀ ಅವಳ ಅಪ್ಪನಿಗೆ ಯಾವುದೇ ಅಭ್ಯಂತರವಿಲ್ಲ. ಲಲಿತ ಸಿನಿಮಾದಲ್ಲಿ ಪಾರ್ಟುಮಾಡಬೇಕೆಂಬ ಹಂಬಲದಲ್ಲಿ ಪಟ್ಟಣಕ್ಕೆ ಓಡಿಹೋಗುತ್ತಾಳೆ. ಅಲ್ಲಿ ಗುಪ್ತ ಎನ್ನುವ ನಿರ್ದೇಶಕನ ಲೈಂಗಿಕ ದುರುಪಯೋಗಕ್ಕೆ ತುತ್ತಾಗಿ ಅವನ ಗರ್ಭವನ್ನು ಹೊತ್ತು ಊರಿಗೆ ಮರಳುತ್ತಾಳೆ. ಲಲಿತೆಯ ಅನುಭವದಿಂದ ಪಾಠ ಕಲಿತುಕೊಳ್ಳುವ ಸರೋಜ ಲಲಿತೆಗಿಂತ ಬೇಗ ಪ್ರಬುದ್ಧಳಾಗುತ್ತಾಳೆ. ಲಲಿತೆ ಮರಳಿ ಊರಿಗೆ ಬಂದಾಗ ಸರೋಜ ತೋರಿಸುವ ಪ್ರತಿಕ್ರಿಯೆ- "If (Lalita) weren't married and became pregnant the picture was quite different. It was altogether grim. You hushed it up as best as you could and your baby, if ever it got born, had no future at all. Saroja thought it wrong…….it was wrong, a crime against the baby, which was the same whether you were married or not but she knew her elders like aunt Almelu who were the majority did not agree……"

ಸರೋಜ ಭಾರತೀಯ ಮೌಲ್ಯಗಳಿಗೆ ಒಲಿದರೂ ಅದನ್ನು ಗೊಡ್ಡಾದ ರೀತಿಯಲ್ಲಿ ಸ್ವೀಕರಿಸುವುದಿಲ್ಲ. ಈ ನೆಲೆಯಲ್ಲಿ ಅವಳು ಅವಳ ತಾಯಿ ಹಾಗೂ ಅತ್ತೆಯ ಗುಂಪಿಗೆ ಸೇರುವುದಿಲ್ಲ. ಪಾಶ್ಚಾತ್ಯ ಹಾಗೂ ಭಾರತೀಯ ನಂಬಿಕೆಗಳ ಎರಡು ಅತಿರೇಕಗಳ ನಡುವಿನ ಸುವರ್ಣಮಾಧ್ಯಮದ ಪ್ರತೀಕವಾಗಿದ್ದಾಳೆ.

ಸರೋಜ ಹಾಗೂ ಲಲಿತಳ ಮೂಲಕ ಪೂರ್ವ – ಪಶ್ಚಿಮಗಳ ಸಾಂಸ್ಕೃತಿಕ ಮುಖಾಮುಖಿಯನ್ನು ಹೊರಗೆಡಹುವಾಗ ಲೇಖಕಿ ಅನೇಕಕಡೆ ಅವಾಸ್ತವ ಚಿತ್ರಣಕ್ಕೆ ಎಡಮಾಡಿಕೊಟ್ಟಿರುವುದು ಅನೇಕ ವಿಮರ್ಶಕರ ಟೀಕೆಗೆ ಗುರಿಯಾಗಿದೆ. ಭಾರತದಂತಹ ಸಣ್ಣ ಹಳ್ಳಿಯಲ್ಲಿ ಒಂದೇ ವಾತಾವರಣದಲ್ಲಿ ಬೆಳೆದ ಇಬ್ಬರು ಹೆಣ್ಣುಮಕ್ಕಳು ತೋರುವ ವಿರುದ್ಧ ಸ್ವಭಾವಗಳು, ಸಂಪ್ರದಾಯಸ್ಥ ಮನೆಯಲ್ಲಿ ಬೆಳೆದ ಲಲಿತೆಗೆ ಪರಪುರುಷರೊಡನೆ ಓಡಾಡಲು ಅವಳ ತಂದೆಯೇ ಅನುಮತಿ ಕೊಡುವುದು ಇವುಗಳೆಲ್ಲಾ ಭಾರತೀಯ ಹಳ್ಳಿಯ ಪರಿಸರದಲ್ಲಿ ಕಲ್ಪಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಕಮಲಾ ಅವರು ಲಂಡನ್ನಿನ ಹಳ್ಳಿಯನ್ನೇ ಅನಾಮತ್ತಾಗಿ ಭಾರತದೊಳಗೆ ತಂದಿರಿಸಿದಂತಿದೆ ಎಂಬುದು ನಿಜವಾದರೂ ಆ ಕಾದಂಬರಿ ಸರೋಜಳ ಮೂಲಕ ಅನಾವರಣಗೊಳಿಸುವ ಸ್ತ್ರೀಲೋಕ ಮಾತ್ರ ಬೆರಗುಗೊಳಿಸುವಂತಹುದು. ಈ ಕಾದಂಬರಿಯ ಮೇಲಿನ ಕೊರತೆಗಳನ್ನು ಲಕ್ಷ್ಯದಲ್ಲಿಟ್ಟು ಕೊಂಡೇ ಈ ಅಂಶವನ್ನು ಗಮನಿಸಬೇಕಾಗುತ್ತದೆ.

ಹಳ್ಳಿಯ ಕೆಳವರ್ಗದ ಮಾಣಿಕ್ಕಂ ಎನ್ನುವವನ ಹೆಂಡತಿ ಹಸಿಬಾಣಂತಿ, ಶ್ರೀಮಂತರ ಮಕ್ಕಳಿಗೆ ಹಾಲೂಡಿಸಲು ಹೋಗುವ ವಿಷಯ ಸರೋಜಳಿಗೆ ತಿಳಿದಾಗ " she was certain she would never give away her milk to another woman's baby" "…….It flows, see how it flows…and she opened her bodice and squeezed the nipple between fingers & thumb so that Saroja could see the bluish white milk spurt. She did not press hard, Saroja noticed. She did not have to press at alltimes-the milk squirted out in five or six thin jets of its own accord when her baby cried" (Pp. 6. Kamala Markandeya. 1973) ಅವಳು ಹೀಗೆ ಆಲೋಚಿಸುವುದು, ಅವಳು ಈವರೆಗೆ ತನ್ನ ಮನೆಯಲ್ಲಿ ಕಾಣದ ದೃಶ್ಯವನ್ನು ಮಾಣಿಕ್ಯಂನ ಮನೆಯಲ್ಲಿ ಕಂಡು ವಿಸ್ಮಯ ಪಡುವುದು ಅವಳ ಬಾಲಪ್ರಪಂಚ ವಿಸ್ತಾರವಾಗುತ್ತಿರುವುದರ ಸಂಕೇತ ವಾಗಿದೆ.



ನಮ್ಮ ಸಂಸ್ಕೃತಿಯಲ್ಲಿ ಹೆಣ್ಣು ದೇಹವನ್ನು ಗಂಡಿನ ಕಣ್ಣಿನಿಂದ ನೋಡಲಾಗಿದೆ. ಹೆಣ್ಣು ತನ್ನ ದೇಹದ ಬಗ್ಗೆ ಮಾತನಾಡುವುದು ಅದು ಅರಳುತ್ತಿರುವ ಪರಿಯನ್ನು ಕಂಡು ಸೋಜಿಗ ವ್ಯಕ್ತಪಡಿಸುವುದು ನಿಶಿದ್ಧವಾದುದು. ಇಂತಹ ಸಂಸ್ಕೃತಿಯೊಳಗೆ ಹೆಣ್ಣಿನೊಳಗೆ ಸ್ತ್ರೀತ್ವ ಜಾಗೃತವಾಗುತ್ತಿರುವ ಸಂಧರ್ಭವನ್ನು ಲಲಿತೆಯ ಮೂಲಕ ಕಂಡರಿಸಿರುವುದು ಮಹತ್ತರವಾದುದು. "Lalita came in she did nothing. Stood dripping and watched. Her body was wet and golden, her hair was

streaming"...look at me, said Lalita. Saroja had been looking, out of slits her eyes had turned shifting..........Look, Said Lalita, tilted up Saroja's face which wanted to turn any where except where it was hidden but was mesmerized. Look.....and ran her hands down her body, down the length of it, touching its secret places, Her nipples were rubbery, perked up when her fingers passed. She knelt with her knees together beside the rust long hay, parted her knees to reveal the cleft which was wet. Her whole body was wet and shinning and slippery...(Kamala Markandeya; Pp.72..1973.)

ಹೆಣ್ಣು ಮಕ್ಕಳ ತೀರ ಖಾಸಗಿಯಾದ ಸ್ತ್ರೀ ಲೈಂಗಿಕತೆಯ ಲೋಕವೊಂದನ್ನು ಮೇಲಿನ ಸಾಲುಗಳು ಪರಿಣಾಮಕಾರಿಯಾಗಿ ಹಿಡಿದಿಡುತ್ತವೆ. ಇದು ಈ ಕಾದಂಬರಿಯ ಶಕ್ತಿಯಾಗಿದೆ. ಮಾಣಿಕ್ಯಂನ ಹೆಂಡತಿಗೆ ಗರ್ಭಪಾತ ಆಗುವ ದೃಶ್ಯವನ್ನು ನೋಡಿ ಆಘಾತಕ್ಕೆ ಒಳಗಾಗುವ ಸರೋಜಳ ಬಾಲ ಮನಸ್ಸು ಸ್ತ್ರೀಯೊಬ್ಬಳು ಅನುಭವಿಸ ಬೇಕಾಗಿರುವ ನೋವಿನ ಅಗಾಧತೆಯನ್ನು ಕಂಡುಕೊಳ್ಳುತ್ತದೆ. Saroja tapped the door which was tied up with a string . A voice with a hint of spectacular in it replied, told her to keep out. Saroja asked why, the voice which was manikkam's, replied that these were things unfitting for her to see!......Manikkam came out- she says you can go in, he said. ....it was different. She felt less confident. It was the smell, it menaced her nostrils. The root of it was blood. She could easily imagine bucking and rearing if she had seen an animal.....she stood by the door in darkness from leaving the dazzling Sun, trying to remember she was sensible.....The raw worm salty smell came from her most strongly, it also rose from a bundle in the corner. It is nothing she said to Saroja you should not see. You are a woman too.....Saroja advanced. Sha saw the smears on the bundle, on the rags on the floor. It is just a little blood said Manikkam's wife. A woman gets used to it ......You are not dying? Are you?inquired Saroja anxiously. No. said Manikkam's wife. I have just lost a baby. She sounded quite calm. It horrified Saroja. She thought it was aweful. Loosing ones baby, Her eyes began to prick, imagining the poor little expired baby done up in the sodden parcel.....Saroja went home hugged her mother she was glad Amma was not in that position" (Pp. 150)

ಹಳ್ಳಿಯ ಈ ಬಗೆಯ ಅನೇಕ ಅನುಭವಗಳು ಸರೋಜಳ ಲೈಂಗಿಕ ಪ್ರಜ್ಞೆಯನ್ನು ರೂಪಿಸುತ್ತವೆ. ಹೊರಗಿನ ಪ್ರೌಢ ಪ್ರಪಂಚ ಅವಳ ಬಾಲ ಪ್ರಪಂಚದೊಳಗೆ ಕಾಲಿಡುತ್ತಲೇ ಅವಳು ತನ್ನ ಮುಗ್ಧತೆಯನ್ನು ಕಳೆದುಕೊಳ್ಳುತ್ತಾ ಹೋಗುತ್ತಾಳೆ. ಮಾಣಿಕ್ಯಂನ ಗುಡಿಸಲು, ಅವರ ಬಡತನ, ಅವರ ಸಂಕಷ್ಟಗಳು, ಮಾಣಿಕ್ಯಂನ ಹೆಂಡತಿಯ ಗರ್ಭಪಾತ ಇವು ಸರೋಜಳ ಪರಿಧಿಯನ್ನು ವಿಸ್ತರಿಸುತ್ತವೆ. ಆದರೂ ಇನ್ನೂ ಪೂರ್ಣವಾಗಿ ಮುಗ್ಧತೆಯನ್ನು ಕಳೆದುಕೊಂಡು ಭ್ರಷ್ಟವಾಗದ ಅವಳ ಬಾಲ ಲೋಕ ಈ ಸಂಘರ್ಷಗಳ ಹಿಂದಿರುವ ಸಾಮಾಜೀಕರಣವನ್ನು, ವಿಷಮತೆಯನ್ನು ಪ್ರಶ್ನಿಸುತ್ತದೆ.

ಅಮ್ಮ, ಅಲಮೇಲು ಅವರ ಆಲೋಚನೆಗಳ ಮುಂದುವರೆದ ಪರಿಷ್ಕೃತಗೊಂಡ ದೃಷ್ಟಿಕೋನ ಸರೋಜಳದಾಗಿದೆ. ಇವರೆಲ್ಲರ ಪಾಲಿಗೆ ಸುಖವೆನ್ನುವುದು- ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿ ನಮ್ಮ ಎಲ್ಲಾ ಸಾಮಾಜಿಕ ಬದ್ಧತೆಗಳನ್ನು ಉಲ್ಲಂಘಿಸುವುದರ ಮೇಲೆ ಅವಲಂಬಿತ ವಾಗಿಲ್ಲ. ಅಂತಹ ಸಾಮಾಜಿಕ ನಿಲುವುಗಳ ತಾತ್ವಿಕತೆಯನ್ನು ಗ್ರಹಿಸುವುದರಲ್ಲಿ, ನೈತಿಕ ಮೌಲ್ಯಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ತಮ್ಮ ಕಾಲಕ್ಕೆ ಅರ್ಥಪೂರ್ಣವಾಗಿ ವ್ಯಾಖ್ಯಾನಿಸಿ ಕೊಳ್ಳುವುದರಲ್ಲಿ ಮಾತ್ರವಲ್ಲ ಅದನ್ನು ಬದುಕಿನಲ್ಲಿ ಅಳವಡಿಸಿಕೊಳ್ಳುವು ದರಲ್ಲಿದೆ. ಬದಲಾಗುತ್ತಿರುವ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀ ಅಸ್ತಿತ್ವದ ಹುಡುಕಾಟವನ್ನು ಲೇಖಕಿ ಪ್ರಜ್ಞಾಪೂರ್ವಕವಾಗಿ ಲಲಿತಳ ಪಾತ್ರದ ಮೂಲಕ ಮಾಡುತ್ತಾರೆ. ಆದುದರಿಂದಲೇ ಅವಳ ಆಧುನಿಕತೆ ಉಪಭೋಗದ ಬೆನ್ನುಹತ್ತಿದ ಐಷಾರಾಮದ ಹುಸಿ ಆಧುನಿಕತೆಯ ಪ್ರತೀಕವಾಗುತ್ತದೆ. ವೈಯಕ್ತಿಕ ಸ್ವಾತಂತ್ರ್ಯವೆಂಬುದು ಸ್ವೇಚ್ಛೆಯಾಗುವ ಅಪಾಯವನ್ನು, ಆಧುನಿಕತೆಯ ಮಿತಿಯನ್ನೂ ವ್ಯಕ್ತ ಪಡಿಸುವುದರ ಜೊತೆಗೆ, ಗೊಡ್ಡಾಗದ ನಮ್ಮ ಸಾಂಸ್ಕೃತಿಕ ಮೌಲ್ಯಗಳ ಮಹತ್ವವನ್ನು ಆತ್ಮಸಾತ್ ಮಾಡಿಕೊಂಡು ಸಾಮಾಜಿಕ ಜವಾಬ್ದಾರಿಗಳನ್ನು ಹೆಣ್ಣು ಬೆಳೆಸಿಕೊಳ್ಳಬೇಕೆಂಬುದರ ಸಂದೇಶವನ್ನು ಸರೋಜಳ ಪಾತ್ರದ ಮೂಲಕ ಯಶಸ್ವಿಯಾಗಿ ಬಿಂಬಿಸುತ್ತದೆ.

ಇಲ್ಲಿನ ಪ್ರಧಾನ ಸಮಸ್ಯೆಯೆಂದರೆ ಬದುಕಿ ಉಳಿಯುವುದೇ ಆಗಿದೆ. ಇಲ್ಲಿನ ಎಲ್ಲ ಮಹಿಳೆಯರಿಗೆ ಸಮಾನವಾದ ಸಂಗತಿಯೆಂದರೆ ತಮ್ಮ ಏಳಿಗೆಗೆ ಪರ್ಯಾಯ ಕೇಂದ್ರಗಳನ್ನು ಹುಡುಕಿಕೊಳ್ಳುವುದೇ ಆಗಿದೆ.

ಬಹುತೇಕ ಭಾರತೀಯ ಲೇಖಕಿಯರು ಸ್ತ್ರೀಪಾತ್ರಗಳ ಮೂಲಕ ಸ್ತ್ರೀಪ್ರಜ್ಞೆಯನ್ನು ಇದರ ಜಾಗೃತಿಯನ್ನು ಅಂತಿಮವಾಗಿ ತಮ್ಮ ಅಂತರಂಗವನ್ನು ಶ್ರೀಮಂತಗೊಳಿಸಿಕೊಳ್ಳುವುದನ್ನು ಚಿತ್ರಿಸುತ್ತಾರೆ. ಅಂತರಂಗದ ಪರಿವೀಕ್ಷಣೆ, ಅಂತರಂಗದ ಶೋಧಗಳು ತಮ್ಮಲ್ಲಿ ಅಂತರ್ಗತವಾದ ಶಕ್ತಿಯನ್ನು ಕಂಡುಕೊಳ್ಳಲು ಸಹಾಯಕವಾಗುತ್ತದೆ. ಈಗ ಹೆಣ್ಣು ವಿಮೋಚನೆಯ ಸಾಧನವಾಗಿ, ತಾಯಾಗಿ, ಹೆಂಡತಿಯಾಗಿ, ಸೋದರಿಯಾಗಿ, ಮಗಳಾಗಿ ಕುಟುಂಬವವನ್ನು ಕಾಪಾಡುವ ಶಕ್ತಿಯಾಗಿದ್ದಾಳೆ. ಈ ಕಾದಂಬರಿಗಳು ಸ್ತ್ರೀ ಹೇಗೆ ಸಂಸ್ಕೃತಿಯ ಬೆನ್ನೆಲುಬಾಗಿ ದೈಹಿಕ, ಭಾವನಾತ್ಮಕ ಸಂಸ್ಕೃತಿಯ ಅಂತಃಶಕ್ತಿಯನ್ನು ತಮ್ಮ ಕುಟುಂಬಳಿಗೆ ಧಾರೆಯೆರೆಯುವುದರ ಮೂಲಕ ಮಾನವ ಕುಟುಂಬವನ್ನು ಮುನ್ನಡೆಸುವ ಶಕ್ತಿಯಾಗಿದೆ ಎಂಬುದನ್ನು ಚಿತ್ರಿಸುತ್ತವೆ. ಇದನ್ನು ಮೂರು ನೆಲೆಗಳಲ್ಲಿ ಕಾಣಬಹುದು-ಮೊದಲನೆಯದು, ಅಂತರಂಗ ಪರಿವೀಕ್ಷಣೆಯದು, ಎರಡನೆಯದು, ಎಲ್ಲವನ್ನೂ ಸಹಿಸುವುದರ ಮೂಲಕ ಆದರ್ಶ ಜೀವಿಗಳಾಗುವುದರಲ್ಲಿ. ಮತ್ತು

ಮೂರನೆಯದರಲ್ಲಿ ತಮ್ಮ ಬಗ್ಗೆ ಹೊಸ ಶೋಧಗಳನ್ನು ಮಾಡುವುದರ ಮೂಲಕ ಜಗತ್ತಿನೊಂದಿಗಿನ ತಮ್ಮ ಸಂಬಂಧವನ್ನು ಅರ್ಥಪೂರ್ಣವಾಗಿ ಸ್ಥಾಪಿಸುತ್ತಾರೆ. ಪುರುಷ ಪ್ರಧಾನ ಸಮಾಜದಲ್ಲಿ, ಸಾಂಪ್ರದಾಯಿಕ ನೆಲೆಗಳನ್ನು ಈ ಪಾತ್ರಗಳು ಸರಿಯಾಗಿ ಹೊಂದಿಕೊಳ್ಳುತ್ತವೆ ಮತ್ತು ತಮ್ಮದೇ ಆದ ಮೌಲ್ಯವ್ಯವಸ್ಥೆಯನ್ನು ಸ್ಥಾಪಿಸುವುದರಲ್ಲಿ ತಮ್ಮ ಅಂತರಂಗದ ಶಕ್ತಿಯಿಂದ ಸಾಮಾಜಿಕ ಅನ್ಯಾಯಗಳನ್ನು ಎದುರಿಸಲು ಸಮರ್ಥವಾಗುತ್ತವೆ.

ಕಮಲಾಮಾರ್ಕಂಡೇಯ ಅವರ ಹೆಚ್ಚಿನ ಬರಹಗಳಲ್ಲಿ ಸ್ತ್ರೀ ಪಾತ್ರಗಳು ಪರಂಪರೆ ಮತ್ತು ಆಧುನಿಕತೆಯ ತಿಕ್ಕಾಟಕ್ಕೆ ಒಳಗಾಗಿವೆ. ಸ್ವಾಯತ್ತತೆಯ ಬಯಕೆ ಮತ್ತು ಪೋಷಕತ್ವವನ್ನು ಮಗಳಾಗಿ, ತಾಯಿಯಾಗಿ, ಹೆಂಡತಿಯಾಗಿ ತಮ್ಮ ಕರ್ತವ್ಯಗಳನ್ನು ನಿಭಾಯಿಸುವುದರ ಮೂಲಕ ತಮ್ಮ ಘನತೆಯನ್ನು ಅವು ಕಾಯ್ದುಕೊಳ್ಳುತ್ತವೆ. ಈ ಎಲ್ಲದರೊಂದಿಗೆ ಭಾರತೀಯ ನಾರಿ ಅತ್ಯಂತ ಜಾಣ್ಮೆಯಿಂದ ತನ್ನನ್ನು ತಾನು ತೊಡಗಿಸುವುದರಲ್ಲಿ ಯಶಸ್ವಿಯಾಗುತ್ತಾಳೆ. ಅವಳು ತನ್ನ ಕುಟುಂಬವನ್ನು ಪೋಷಿಸುತ್ತಾಳೆ, ಯಾಕೆಂದರೆ ಅದು ಅವಳಿಗೆ ಬೇಕಾಗಿದೆ. ಅವಳು ಸ್ವಾಯತ್ತೆಯನ್ನು ಅನೇಕ ರೀತಿಯಲ್ಲಿ ಸ್ಥಾಪಿಸುತ್ತಾಳೆ. ಕಮಲಾ ಮಾರ್ಕಂಡೇಯ ಅವರ ಕಾದಂಬರಿಯಲ್ಲಿ ಸ್ತ್ರೀ ಪಾತ್ರಗಳು ಆರ್ಥಿಕ ಅಸಮಾನತೆಯ ಬಲಿಪಶುಗಳೆ ಹೌದು. ಆದರೆ ಅವು ಅವುಗಳನ್ನು ಮೀರುವುದರ ಮೂಲಕ ವಿಶಾಲವಾದ ಸಾರ್ವತ್ರಿಕ ಪ್ರೇಮ ಮತ್ತು ಸೌಹಾರ್ದತೆಯ ಕಡೆಗೆ ತುಡಿಯುತ್ತವೆ. ಆದ್ದರಿಂದಲೇ ಅವರ ದೈಹಿಕ ಹಾಗೂ ಭಾವನಾತ್ಮಕ ಶಕ್ತಿಗಳು ಪ್ರಶಂಸಾರ್ಹವಾಗಿವೆ.

ಅನಿತಾ ದೇಸಾಯಿ ಸಹ ತಮ್ಮ ಕಾದಂಬರಿಗಳಲ್ಲಿ ಸ್ತ್ರೀಯರ ಮಾನಸಿಕ ಜಗತ್ತಿನ ಆಳಕ್ಕೆ ಪ್ರವೇಶಿಸಿ ಅವು ತಮ್ಮ ಮತ್ತು ಸಮಾಜದ ನಡುವೆ ಸ್ಥಿತಿಸ್ಥಾಪಕತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತವೆ. ಅದು ಸಾಧ್ಯವಾಗದಿದ್ದಾಗ ಪರಕೀಯತೆಯನ್ನು ಉಂಟುಮಾಡುತ್ತವೆ. ಅವುಗಳನ್ನು ಮೀರಬಲ್ಲ ಶಕ್ತಿ ಆ ಪಾತ್ರಗಳಿಗೆ ಇದೆ. ಅನಿತಾ ದೇಸಾಯಿ ತಮ್ಮ ಸಂದರ್ಶನ ವೊಂದರಲ್ಲಿ ಹೇಳುವಂತೆ "ಅವರ ಬರವಣಿಗೆಯ ಉದ್ದೇಶವೆಂದರೆ ತಮ್ಮ ಸ್ವಂತದ ಸಂಶೋಧನೆ ಮತ್ತು ಅದನ್ನು ಕಲೆಯಮೂಲಕ ಅಭಿವ್ಯಕ್ತಿಗೊಳಿಸುವುದು. ವಾಸ್ತವವನ್ನು ಮತ್ತು ಅದರ ಮಹತ್ವವನ್ನು ಮನಗಾಣಿಸಲು ಹೊರಗಿನದಕ್ಕಿಂತ ಒಳಗಿನದ್ದಕ್ಕೆ ಪ್ರವೇಶಮಾಡಿ, ಆಳವನ್ನು ಉದ್ದೀಪನ ಗೊಳಿಸಿ ಅದನ್ನು ಜಗತ್ತಿಗೆ ತೋರಿಸಿಕೊಡುವುದೇ ಆಗಿದೆ"

ಅನಿತಾದೇಸಾಯಿಯವರ ಪ್ರತಿ ಪಾತ್ರವೂ ವಾಸ್ತವತೆಯನ್ನು ಗ್ರಹಿಸಲು ಎದುರಿಸುವ ತೊಡಕುಗಳನ್ನು ಕೆಲಮಟ್ಟಿಗೆ ಹೊಂದಾಣಿಕೆ ಮಾಡಿಕೊಂಡರೂ ಯಶಸ್ಸನ್ನು ಸಾಧಿಸುತ್ತವೆ.

ಶಶಿದೇಶಪಾಂಡೆ ತಮ್ಮ ಎಲ್ಲಾ ಕೃತಿಗಳು ಸ್ತ್ರೀಯ ಮಾನಸಿಕ ಸ್ಥರವನ್ನೂ ಸಮಾಜವನ್ನೂ ಏಕಕಾಲಕ್ಕೆ ಚಿತ್ರಿಸುತ್ತವೆ. ಜೀವನದಲ್ಲಿನ ದುಸ್ತರ ಅನುಭವಗಳಿಂದಾದ ಮಾನಸಿಕ ಆಘಾತಗಳನ್ನು ಅವರ ಪಾತ್ರಗಳು ಹೇಗೆ ಎದುರಿಸುತ್ತವೆ ಎಂಬುದನ್ನು ಚಿತ್ರಿಸುತ್ತಾರೆ. ಈ ನೋವಿನ ಅನುಭವ ಅಂತರಂಗದ ಪರಿವೀಕ್ಷಣೆಗೆ ಎಡೆಮಾಡಿ ಕೊಡುತ್ತದೆ. ಅದು ಜೀವನವನ್ನು ಕುರಿತ ಹೊಸ ನೋಟಕ್ಕೆ ಅಂತಿಮವಾಗಿ ಅನುವು ಮಾಡಿಕೊಡುತ್ತದೆ. ಅವರ ಪಾತ್ರಗಳು ಕಡೆಗೆ ಶಕ್ತಿಶಾಲಿ ಮಹಿಳೆಯರಾಗಿ ಹೊರಬರುತ್ತವೆ. ಉದ್ಯೋಗಸ್ಥ ಮಹಿಳೆಯರು ಹೊರಗೆ–ಒಳಗೆ ಎದುರಿಸುವ ಆತಂಕಗಳನ್ನು ಅವರು ಚಿತ್ರಿಸುತ್ತಾರೆ. ವಿಭಿನ್ನ ವಯೋಮಾನಗಳ ಸ್ತ್ರೀಯರ ಮನಸ್ಸನ್ನು ಸೆರೆಹಿಡಿಯುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಎಳೆಯ ಪ್ರಾಯದ ಹುಡುಗಿ ತನ್ನ ತಂದೆತಾಯಿಗಳ ಸಂಕೋಲೆಯಿಂದ ಬಿಡುಗಡೆಗೊಳ್ಳಲು ಯತ್ನಿಸಿದರೆ, ವಿವಾಹಿತ ಹೆಣ್ಣು ಅಲ್ಲಿ ಹೆಂಡತಿಯಾಗಿ, ತಾಯಿಯಾಗಿ, ದಾಸಿಯಾಗಿ ಇರಬೇಕಾದ ಚೌಕಟ್ಟನ್ನು ನಿರ್ಮಿಸಿದ್ದಾರೆ. ಆನಂತರ ಮನೆಯ ಹೊಸ್ತಿಲು ದಾಟಿ ಆರ್ಥಿಕವಾಗಿ ಸ್ವತಂತ್ರಳಾದರೂ ಅಲ್ಲಿ ಕೂಡ ಅವಳು ಲಿಂಗಭೇದ ನೀತಿಯನ್ನು ಎದುರಿಸಬೇಕಾಗುತ್ತದೆ. ಈ ಸ್ಥಿತಿಯು ಅವಳನ್ನು ಸ್ವಲ್ಪಕಾಲ ಅಸ್ವಸ್ಥಳನ್ನಾಗಿ ಮಾಡಿದರೂ ಅವಳು ಸ್ವಸಂರಕ್ಷಣಾ ಶಕ್ತಿಯನ್ನು ಬಳಸಿ ಅವುಗಳಿಂದ ಹೊರಬರುವಲ್ಲಿ ಯಶಸ್ವಿಯಾಗುತ್ತಾಳೆ. ಇದನ್ನು ಅವರು ಕನಸುಗಳನ್ನು ಬಳಸುವುದರ ಮೂಲಕ ಸಾಧಿಸುತ್ತಾರೆ.

ಕಮಲಾಮಾರ್ಕಂಡೇಯ, ಅನಿತಾ ದೇಸಾಯಿ, ಶಶಿದೇಶಪಾಂಡೆ ವಿಭಿನ್ನ ವರ್ಗದ ಸಾಂಸ್ಕೃತಿಕ ದೃಷ್ಟಿಕೋನಗಳನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಗೊಳಿಸಿದ್ದಾರೆ. ಪುರುಷ ಪ್ರಧಾನವೆಂಬ ಮಿಥಿಕವನ್ನು ಮೇಲಿನ ಲೇಖಕಿಯರು ತಮ್ಮ ಕೃತಿಗಳ ಸ್ತ್ರೀಪಾತ್ರಗಳ ಮೂಲಕ ಯಶಸ್ವಿಯಾಗಿ ಭಗ್ನಗೊಳಿಸಿದ್ದಾರೆ

*[ಕೃಪೆ : ಮುನ್ನುಡಿ – Indian women novelists – Jyoti singh & Feminism and the post-modern Indian novelists –Anita Myles ]*

●



# ಅಮ್ಮ

ದೇಹ ಚೈತನ್ಯವ ಹೀರಿ
ದೇವತ್ರಯಂತೆ ಹಾಲುಣಿಸಿ
ಕರುಳಬಳ್ಳಿಯ ಸುತ್ತಿ
ಪ್ರೀತಿಯ ಮೆತ್ತೆಯಾಗಿಸಿ
ಎದೆಯ ಪೊರೆಗಳನು ಸೀಳಿ

ಮೆತ್ತನೆ ತಲೆದಿಂಬಾಗಿಸಿ
ಬೆಚ್ಚನೆಯ ಅನುರಾಗದ
ಹೊದಿಕೆಯನು ಹೊದಿಸಿ
ಮಮಕಾರದ ಮುತ್ತುಗಳ ಸುರಿಸಿ
ಮತ್ತು ಬರುವ ಮಮತೆಯ
ಜೋಗುಳವ ಹಾಡುವವಳು

■ *ರೋಹಿಣಿ ಸತ್ಯ*



ತಿಗಣಿ ಬಿದರ ಯಮುನವ್ವ ಮತ್ತು ಡಾ. ಶೈಲಜ ಹಿರೇಮಠ

# 'ಹರದೇಶಿ – ನಾಗೇಶಿ' ತಳಸಮುದಾಯದ ಲಿಂಗಸಂಬಂಧಿ ಅಧ್ಯಯನ

■ ಎಂ.ವಿ. ಸೇತುಮಾಧವ



ಜನವಾಡ ಬುದ್ಧವ್ವ – ಲೇಖಕಿ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಡಾ. ಶೈಲಜ ಹಿರೇಮಠ ಅವರ ಇತ್ತೀಚಿನ ಕ್ಷೇತ್ರಾಧ್ಯಯನ ಆಧರಿತ ಕಲಾಪ್ರಕಾರವೆಂದು ಗುರುತಿಸಿಕೊಂಡಿರುವ 'ಹರದೇಶಿ–ನಾಗೇಶಿ'ಯ ಕುರಿತ ಪುಸ್ತಕ ಹೊರಬಂದಿದೆ. ಇದೊಂದು ಅಪರೂಪದ ಕೃತಿ. ಪ್ರಸ್ತುತ ಕೃತಿಯಲ್ಲಿ ಶೈಲಜಾ ಅವರ ಶ್ರಮ ಹಾಗೂ ನಿಲುವು ಬಹುಮುಖ್ಯಪಾತ್ರ ವಹಿಸುತ್ತದೆ. ಸಂಪೂರ್ಣ ಕೃತಿಗೆ ಅವರ ಸೈದ್ಧಾಂತಿಕ ಮನೋಧರ್ಮ ಹಲವು ಒಳತೋಟಿಗಳನ್ನು ಸೂಕ್ಷ್ಮವಾಗಿ ಬಯಲು ಮಾಡಲು ಸಾಧ್ಯವಾಗಿದೆ. ಮುಖ್ಯವಾಗಿ ಇದೊಂದು ಕೇವಲ ಸಂಶೋಧನಾಧರಿತ ಶೈಕ್ಷಣಿಕ ಕೃತಿಯಲ್ಲ. ಬದಲಿಗೆ ಬದುಕಿನ ಒಳಗೆ ಹುಗಿದಿಟ್ಟ ಹಲವು ನಿಗೂಢಗಳನ್ನು ಅನಾವರಣಗೊಳಿಸುವ ಅಪರೂಪದ ಕೃತಿಯಾಗಿದೆ. ಯಾಕೆಂದರೆ ಒಂದು ಕಲಾ ಪ್ರಕಾರವು ಒಂದು ಭೌಗೋಳಿಕ ಪ್ರದೇಶಕ್ಕೆ ಸೀಮಿತವಾದರೂ, ಅದನ್ನು ಸಾರ್ವತ್ರಿಕಗೊಳಿಸುವುದರೊಂದಿಗೆ, ಲಿಂಗ ಸಂಬಂಧಿ ಸೂಕ್ಷ್ಮತೆಯನ್ನು ಅವಲೋಕಿಸಿ, ಸಮಗ್ರ ಕಲಾಪ್ರಕಾರದ ಒಳಹೊರಗನ್ನು ತೆರೆದಿಡುವುದರೊಂದಿಗೆ ಆ ಕಲೆಯಲ್ಲಿ ಬದುಕು ಸಾಗಿಸುತ್ತಿರುವ ಹಲವು ವ್ಯಕ್ತಿಗಳ ವೈಯಕ್ತಿಕ ಜೀವನ ಕ್ರಮವನ್ನು ನಯವಾಗಿ ಪ್ರತಿಬಿಂಬಿಸಿರುವುದು ಈ ಕೃತಿಯ ಮತ್ತೊಂದು ವೈಶಿಷ್ಟ್ಯವಾಗಿದೆ. ಹೀಗಾಗಿ, ಈ ಪುಸ್ತಕಕ್ಕೆ "ಹರದೇಶಿ–ನಾಗೇಶಿ ಕಲೆ ಮತ್ತು ಕಲಾವಿದರು, ಲಿಂಗ ಸಂಬಂಧಿ ಅಧ್ಯಯನ" ಎಂಬ ಶೀರ್ಷಿಕೆ ನೀಡಿರುವುದು ಅರ್ಥಪೂರ್ಣವಾಗಿದೆ. ಪ್ರಸ್ತುತ 'ಹರದೇಶಿ–ನಾಗೇಶಿ' ಕೃತಿಯು ಕಲೆಯ ಪ್ರಕಾರದ ಹಿಂದಿನ ಕಲಾವಿದರ ಬದುಕಿನ ಕ್ರೌರ್ಯವನ್ನು ನವಿರಾಗಿ ನಿರೂಪಿಸುವುದ ರಿಂದ ವಿಭಿನ್ನ ಕೃತಿಯಾಗಿ ನಿಲ್ಲುತ್ತದೆ.

ಡಾ. ಶೈಲಜಹಿರೇಮಠ ಅವರ ಈ ಕೃತಿಯಲ್ಲಿ ಮುಖ್ಯವಾಗಿ ಆರು ಅಧ್ಯಾಯಗಳಿವೆ. 1. ಹೊಸ್ತಿಲು, 2. ದೇವದಾಸಿಯರಲ್ಲ; ಕಲಾವಿದೆಯರು, 3. ಕಲೆಯ ಹಿಂದಿನ ಕ್ರೌರ್ಯ, 4. ಕಲೆಗಾಗಿ ದುಡಿಮೆಯೋ ದುಡಿಮೆಗಾಗಿ ಕಲೆಯೋ?, 5. ಹಾಡಿಕೆಯು ಹರದೇಶಿ–ನಾಗೇಶಿಯಾದಾಗ, 6. ಮುಗಿಯದ ಮುಕ್ತಾಯ ಹಾಗೂ ಅನುಬಂಧಗಳು, ಪದಕೋಶ ಎಂದು ವಿಂಗಡಿಸಿದ್ದಾರೆ. ಡಾ. ಶೈಲಜ ಹಿರೇಮಠ ಅವರು "ಈ ಅಧ್ಯಯನವು ಹರದೇಶಿ–ನಾಗೇಶಿ ಚರಿತ್ರೆಯನ್ನು ಕಟ್ಟಿಕೊಡುವುದಿಲ್ಲ. ಪಂಥಗಳ ಮೂಲ–ಚೂಲವನ್ನು ಹುಡುಕುವ ಪ್ರಯತ್ನವನ್ನು ಮಾಡುವುದಿಲ್ಲ; ಹರದೇಶಿ–ನಾಗೇಶಿ ಸಾಹಿತ್ಯ ರಚಿಸುವವರ ಕವಿಚರಿತೆಯನ್ನು ಹೇಳುವುದಿಲ್ಲ. ಮರಾಠಿ ಮೂಲದ್ದೋ, ಕನ್ನಡ ಮೂಲದ್ದೋ ಎನ್ನುವ ಭಾಷಾ ಮೂಲದ ಹುಡುಕಾಟವನ್ನು ಪ್ರಸ್ತುತ ಅಧ್ಯಯನ ನಡೆಸಿಲ್ಲ. ಹರದೇಶಿ–ನಾಗೇಶಿ ಹಾಡುಗಾರಿಕೆಯನ್ನು ಕಲಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡಿಲ್ಲ. ಕಲೆಯನ್ನು, ಕಲೆಯನ್ನು ಪೋಷಿಸುವ ಸಮಾಜವನ್ನು, ಕಲೆಯನ್ನು ನಂಬಿದವರ ಬದುಕನ್ನು ಲಿಂಗಸಂಬಂಧದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದರತ್ತ ಪ್ರಸ್ತುತ ಅಧ್ಯಯನ ಆಸಕ್ತಿ ವಹಿಸಿದೆ" ಎನ್ನುವ ಸ್ಪಷ್ಟ ನಿಲುವನ್ನು ನಿರೂಪಿಸಿದ್ದಾರೆ.

ಮೊದಲ ಅಧ್ಯಾಯದಲ್ಲಿಯೇ ಶೈಲಜ ಅವರು ತಮ್ಮ ಕ್ಷೇತ್ರಾಧ್ಯಯನ ಸಂದರ್ಭದ ಅನುಭವವನ್ನು ನೀಡುತ್ತಾ, ಸಮಾಜದ 'ಢೋಂಗೀತನ'ವನ್ನು ಬಯಲು ಮಾಡುತ್ತಾರೆ. 'ದೇವದಾಸಿ' ಹಿನ್ನೆಲೆಯುಳ್ಳ ಕಲಾವಿದೆಯರನ್ನು ಭೇಟಿಯಾಗಲು ಹೋದಾಗ ಸ್ಥಳೀಯರು ಅವರ ಮನೆಯನ್ನು ತೋರಿಸಲು ಬರುವುದಿಲ್ಲ. ಹಾಗೆ ತೋರಿಸಲು ಬಂದ ಪುರುಷರ ಕುರಿತು ಊರಿನವರು ತಪ್ಪು ತಿಳಿಯುತ್ತಾರಂತೆ. ಕಂಬಾಗಿ ಹನುಮವ್ವನ ಮನೆಯನ್ನು ಹುಡುಗನೊಬ್ಬ ತೋರಿಸುತ್ತಾನೆಂದದ್ದು ಪ್ರಾಂಶುಪಾಲರ ಹೆದರಿಕೆಯಿಂದ. ಕಂಬಾಗಿ ಹನುಮವ್ವನ ಮನೆಯನ್ನು ತೋರಿಸಲಾಗದೆ

ತಲೆಮರೆಸಿಕೊಂಡದ್ದು ಸಾಮಾಜಿಕ ಹೆದರಿಕೆಯಿಂದ. ಕಂಬಾಗಿ ಅಪರಿಚಿತ ಊರಾಗಿದ್ದರಿಂದ ಆಕೆಯ ಮನೆಯನ್ನು ಹುಡುಕಲು ಆ ಊರಿನವರ ಸಹಾಯ ಅಗತ್ಯವಾಗಿತ್ತು. ಪುರುಷರನ್ನು ಕೇಳಿದರೆ ಮೀಸೆಯಲ್ಲಿಯೇ ಮುಸಿ ಮುಸಿ ನಕ್ಕು "ಆಕಿ ಮನಿ ಗೊತ್ತಿಲ್ಲ. ನಾವು ಅಂಥಾ ಜಗಾಕ ಹೋಗೂದಿಲ್ಲರಿ" ಎನ್ನುತ್ತಿದ್ದರು. ಮಹಿಳೆಯರು "ಕೇರ್ಯಾಗಿನ ಹೆಣ್ಣಮಕ್ಕಳ ಮನಿ ನಮಗ್ಯಾಂಗ ಗೊತ್ತಾಗಬೇಕ್ರಿ? ಎಂದು ನನ್ನನ್ನೇ ಪ್ರಶ್ನಿಸುತ್ತಿದ್ದರು. ಇದು ನಮ್ಮ ಸಮಾಜದಲ್ಲಿ ಬಡತನವಿದ್ದರೂ ಬಿಡದ ಸಾಮಾಜಿಕ ಸ್ತರಗಳ ನಂಬಿಕೆಗಳೊಂದಿಗೆ ನಮ್ಮ ದೃಷ್ಟಿಕೋನವನ್ನು ಎತ್ತಿ ತೋರಿಸುತ್ತದೆ."

'ಹರದೇಶಿ-ನಾಗೇಶಿ' ಕಲಾವಿದರನ್ನು ರೂಢಿಗತವಾಗಿ 'ಹಾಡಿಕೆಯವರು' ಎನ್ನುತ್ತಾರೆ. ಸಂಪೂರ್ಣ ರಾತ್ರಿ ನಡೆಯುವ ಈ ಗಾಯನಗೋಷ್ಠಿ ಮುಖ್ಯವಾಗಿ ಹರದೇಶಿಯವರು ಶಿವ ಹೆಚ್ಚು ಎಂದರೆ, ನಾಗೇಶಿಯವರು ಪಾರ್ವತಿ ಹೆಚ್ಚು ಎನ್ನುತ್ತಾರೆ. ಹೀಗಾಗಿ ನೇರವಾಗಿ ಲಿಂಗ ಸಂಬಂಧವನ್ನೇ ಕೇಂದ್ರದಲ್ಲಿರಿಸಿಕೊಂಡು ನಡೆಯುವ ಹಾಡಿಕೆಯ ಕಾರ್ಯಕ್ರಮದಲ್ಲಿ ಮಹಿಳೆಯರನ್ನೇ ಅಣಕು ಮಾಡುವ ಪರಿಪಾಠವನ್ನು ಬೆಳೆಸಿಕೊಂಡು ಬಂದಿದ್ದಾರೆ. ಇದಕ್ಕೆ ಸೊಲ್ಲಾಪುರದ ಮಲ್ಲಿಕಾರ್ಜುನ ಎಂಬುವರು "ಎಷ್ಟೇ ಅಂದರೂ ತಂದೆಯೇ ತಾಯಿಗಿಂತ ಗುಲಗಂಜಿ ತೂಕದಷ್ಟಾದರೂ ಹೆಚ್ಚಿರುತ್ತಾನೆ" ಎಂದು ತಮ್ಮ ಧೋರಣೆಯನ್ನು ಮುಂದಿಡುತ್ತಾರೆ.

ಮೂಲತಃ ಹಾಡಿಕೆಯವರ ಪ್ರತಿಕ್ರಿಯೆಗಳನ್ನು ಪುರುಷ ಹಾಡುಗಾರರು, ಮಹಿಳಾ ಹಾಡುಗಾರರು ಎನ್ನುವ ಎರಡು ಪ್ರಧಾನ ನೆಲೆಗಳಲ್ಲಿ ವಿಂಗಡಣೆ ಮಾಡಿಕೊಳ್ಳಲು ಕ್ಷೇತ್ರಾಧ್ಯಯನ ಅನುಭವ, ಪ್ರಕರಣಗಳೇ ಬುನಾದಿ ಎಂದು ಹೇಳುತ್ತಾರೆ ಶೈಲಜಾ ಅವರು.

ಮಹಿಳಾ ಹಾಡುಗಾರರು ಇಂತಹ ಕ್ಷೇತ್ರಾಧ್ಯಯನ ಸಂದರ್ಭದಲ್ಲಿ ಪ್ರತಿಕ್ರಿಯಿಸಿರುವ ರೀತಿಯನ್ನು 1. ಪಿಂಚಣಿ ನಿರೀಕ್ಷೆಯಲ್ಲಿ, 2. ಅವಕಾಶ ನಿರೀಕ್ಷಣೆಗಾಗಿ ದಾಖಲಾಗ ಬಯಸುವವರು, 3. ಕೀಳರಿಮೆಯಿಂದ ಮೌನ, 4. ಕಲಿತ ಮಕ್ಕಳ ಕಾರಣಕ್ಕಾಗಿ ಪ್ರತಿಕ್ರಿಯೆಯ ನಿರಾಕರಣೆ, 5. ಕೇಳಿಸಿಕೊಳ್ಳುವ ಹೃದಯಕ್ಕಾಗಿ ಕಾಯ್ದವರು. ಎಂಬ ಶೀರ್ಷಿಕೆಗಳ ಅಡಿಯಲ್ಲಿ ಸೋದಾಹರಣವಾಗಿ ವಿವರಣೆ ನೀಡುತ್ತಾರೆ. ಹಾಗೆಯೇ ಪುರುಷ ಹಾಡುಗಾರರ ಪ್ರತಿಕ್ರಿಯೆಗಳನ್ನು 1. ಕೀರ್ತಿಗಾಗಿ ದಾಖಲಾಗಬಯಸುವವರು, 2. ದಾಖಲಾತಿ, ಯಾರಿಗೆ ಲಾಭ? 3. ಪಿಂಚಣಿ ಬಯಸುವವರು, 4. ಕಲಾ ಪರಂಪರೆ ಉಳಿಸುವುದಕ್ಕಾಗಿ ಧನ ಸಹಾಯ ಯಾಚಿಸುವವರು, 5. ಹಣಕ್ಕಾಗಿ ಹಾಡುಗಳನ್ನು ಮಾರಬಯಸುವವರು ಎಂದು ವಿಂಗಡಿಸಿ, ವಿವರಣೆ ನೀಡುತ್ತಾರೆ. ಈ ವಿಭಿನ್ನ ಪ್ರತಿಕ್ರಿಯೆಗಳಲ್ಲೇ ಲಿಂಗ ತಾರತಮ್ಯದ ಧೋರಣೆಗಳು ನಿಚ್ಚಳವಾಗಿ ಪ್ರತಿಬಿಂಬಿತ ವಾಗುತ್ತವೆ. ಎರಡನೆಯ ಅಧ್ಯಾಯದಲ್ಲಿ ಹಾಡಿಕೆಯವರನ್ನು 'ದೇವದಾಸಿ'ಯರು ಎಂದು ಪರಿಗಣಿಸಿರುವ ಸಮಾಜಕ್ಕೆ, ಹಾಡಿಕೆಯ ಕಲಾವಿದರು ತಾವು ದೇವದಾಸಿಯರಲ್ಲ, ಕಲಾವಿದೆಯರು ಎಂದು ಹೇಳುವ ಅನಿವಾರ್ಯತೆಯ ವಿವರಣೆಯೊಂದಿಗೆ ಅನುಭವ ಹಂಚಿಕೊಳ್ಳುತ್ತಾರೆ.

## ಹಾಡಿಕೆಯ ಸಾಂಸ್ಕೃತಿಕ ಪದಕೋಶ

**ಉಡಿ ತುಂಬಿಸಿಕೊಳ್ಳುವುದು :** ಹಾಡಿಕೆ ಮಾಡದೇ ಇರುವ 'ಜೋಗತಿಯರು,' 'ಬಸವಿಯರು' ಮೊದಲು ಹೊಂದುವ ಲೈಂಗಿಕ ಸಂಬಂಧವನ್ನು 'ಹೆಣ್ಣು ಮಾಡುವುದು' ಎಂದು ಹೇಳಿದರೆ, ಹಾಡಿಕೆ ಮಾಡುತ್ತಿದ್ದ 'ಜೋಗತಿಯರು,' 'ಬಸವಿಯರು' ಮೊದಲ ಲೈಂಗಿಕ ಸಂಬಂಧ ಹೊಂದುವ ದನ್ನು 'ಉಡಿ ತುಂಬಿಸಿಕೊಳ್ಳುವುದು' ಎಂದು ಹೇಳಿದರು. ಜೀವನದ ಕೊನೆಯವರೆಗೂ ಜೊತೆಗಿರುತ್ತೇನೆಂದು ಅವರು ನಂಬಿದ ದೈವದ ಮೇಲೆ ಹಾಗೂ ಅವರ ಸಮುದಾಯದ ಮುಖಂಡರೆದುರಿಗೆ ಪ್ರಮಾಣ ಮಾಡಿದ ವ್ಯಕ್ತಿಯೊಂದಿಗೆ ಮಾತ್ರ ಉಡಿ ತುಂಬಿಸಿಕೊಳ್ಳುವರು.

**ಕಲ್ಗಿ-ತುರಾ :** ಅಕಬರನ ಆಸ್ಥಾನದಲ್ಲಿ ಶಹಾಅಲಿ ಮತ್ತು ತುಕನಗೀರ ಎನ್ನುವ ಲಾವಣಿ ಹಾಡುಗಾರರು ಇದ್ದರಂತೆ. ಇವರು ಹರದೇಶಿ-ನಾಗೇಶಿ ಹಾಡುಗಳನ್ನು ಹೇಳುತ್ತಿದ್ದರಂತೆ. ಅವರ ಹಾಡಿಕೆಯನ್ನು ಮೆಚ್ಚಿಕೊಂಡ ಅಕಬರನು ಶಹಾಅಲಿಗೆ ಕಲ್ಗಿ (ಹಕ್ಕಿಯ ಗರಿ)ಯನ್ನು, ತುಕನ್‌ಗೀರನಿಗೆ ಕಿರೀಟದಲ್ಲಿ ಧರಿಸುತ್ತಿದ್ದ ತುರಾಯಿಯನ್ನು (ಹೂವಿನಗುಚ್ಛ) ಕೊಟ್ಟನಂತೆ. ಹೀಗಾಗಿ ಅಂದಿನಿಂದ ಇವರು ಹಾಡುವ ಹಾಡುಗಳನ್ನು ಕಲ್ಗಿ – ತುರಾ ಎಂದು ಕರೆಯುವ ವಾಡಿಕೆ ಪ್ರಾರಂಭ ವಾಯಿತಂತೆ (ವಿವರಣೆಗೆ ಗಮನಿಸಿ: ಹೆಂಡಿ ಬಿ.ಬಿ., ಲಾವಣಿಕಾರರು, 1980, ಜನಪದ ಸಾಹಿತ್ಯ ದರ್ಶನ(ಆರು). ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ) ಪ್ರಹ್ಲಾದ ಕುಮಾರ ಬಾಗೋಜಿ ಅವರು 'ಕಲ್ಗಿ' ಎನ್ನುವುದು ಹೆಣ್ಣಿನ ತಲೆಗಿರುವ ಆಭರಣವಾಗಿ ಹೆಣ್ಣಿನ ಸಂಕೇತವಾದರೆ 'ತುರಾಯಿ' ಗಂಡಿನ ಸಂಕೇತ, (ಪ್ರಹ್ಲಾದ ಕುಮಾರ ಬಾಗೋಜಿ, ಲಾವಣಿ, 1974, ಜನಪದ ಸಾಹಿತ್ಯ ದರ್ಶನ-1, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ) ಎನ್ನುತ್ತಾರೆ. ಹರದೇಶಿ ಹಾಡುಗಳನ್ನು 'ಕಲ್ಗಿ' ಎಂದೂ, ನಾಗೇಶಿ ಹಾಡುಗಳನ್ನು 'ತುರಾ' ಎಂದೂ ಕರೆಯಲಾಗುತ್ತಿದೆ. ಜನಸಾಮಾನ್ಯರಲ್ಲಿ ಕಲ್ಗಿ-ತುರಾ ಪದ ಬಳಕೆಯಲ್ಲಿಯೇ ಇಲ್ಲ.

**ಕೊಟ್ಟ-ಕೊಂಡ ಹೆಣ್ಣು:** 'ಕೊಟ್ಟ ಹೆಣ್ಣು' ಎಂದರೆ ಮಗಳು; 'ಕೊಂಡ ಹೆಣ್ಣು' ಎಂದರೆ ಸೊಸೆ. 'ಮಗಳು-ಸೊಸೆ' ಎನ್ನುವದಕ್ಕೆ 'ಕೊಟ್ಟ-ಕೊಂಡ ಹೆಣ್ಣು' ಎನ್ನುತ್ತಾರೆ. ತಳ ಸಮುದಾಯಗಳಲ್ಲಿ ಮೂಲದಲ್ಲಿ ಕನ್ಯಾಶುಲ್ಕ ಪದ್ಧತಿ ಜಾರಿಯಲ್ಲಿತ್ತು ಎನ್ನುವ ಸುಳಿವನ್ನು ಅವರಲ್ಲಿ ಈಗಲೂ ಚಾಲ್ತಿಯಲ್ಲಿರುವ 'ಕೊಟ್ಟ-ಕೊಂಡ ಹೆಣ್ಣು' ಪದಬಳಕೆ ನೀಡುತ್ತದೆ. ಇತ್ತೀಚೆಗೆ 'ವರದಕ್ಷಿಣೆ ಪದ್ಧತಿ' ತಳ ಸಮುದಾಯ ಗಳಲ್ಲೂ ಪ್ರವೇಶಿಸಿದೆ. ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಂದ ವರದಕ್ಷಿಣೆ ಪಡೆದುಕೊಂಡರೂ, ಕನ್ಯಾ ಶುಲ್ಕವನ್ನು ಹೆಣ್ಣಿನ ಕಡೆಯವರಿಗೆ ಕೊಡುತ್ತಾರೆ.




## ದೇಸಿ ಬೇರುಗಳ ಗುರುತಿಸುವಿಕೆ

### 1. ಹರದೇಶಿ – ನಾಗೇಶಿ ಕಲೆ ಮತ್ತು ಕಲಾವಿದರು

*ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಹರದೇಶಿ – ನಾಗೇಶಿ ಕಲಾವಿದರ, ಮುಖ್ಯವಾಗಿ ಮಹಿಳಾ ಕಲಾವಿದರ ಅಂತರಂಗವನ್ನು ಬಿಚ್ಚಿಡುವಲ್ಲಿ ಡಾ. ಶೈಲಜರವರ ಪ್ರಾಮಾಣಿಕ ಪ್ರಯತ್ನ ಈ ಪುಸ್ತಕದಲ್ಲಿ ಎದ್ದು ಕಾಣುತ್ತದೆ. ಜೊತೆಗೇ ತಳಸಮುದಾಯದ ಅಧ್ಯಯನಕ್ಕೆ ಬೇಕಾದ ಅನೇಕ ವೈಚಾರಿಕ ವಿಚಾರಗಳನ್ನು ಕೂಡಾ ಇಲ್ಲಿ ಚರ್ಚಿಸಲಾಗಿದೆ. ಹರದೇಶಿ – ನಾಗೇಶಿ ಮಹಿಳಾ ಕಲಾವಿದರ ಬದುಕು ಕನ್ನಡ ನೆಲಕ್ಕೆ, ಅದರಲ್ಲೂ ಉತ್ತರ ಕರ್ನಾಟಕದ ಗ್ರಾಮೀಣ ನೆಲಕ್ಕೆ ಅಂಟಿಕೊಂಡಿರುವಂತಹದು. ಭಾಷೆ, ಭಾವನೆ, ಜೀವನ ಕ್ರಮ, ಬಡತನ, ಊಳಿಗಮಾನ್ಯ ವ್ಯವಸ್ಥೆಯ ಕ್ರೂರ ಮುಖಗಳು, ಜಾತಿ ವ್ಯವಸ್ಥೆ ಇಂತಹ ಎಲ್ಲಾ ಸ್ತರಗಳಲ್ಲಿ ಬಿಚ್ಚಿಕೊಳ್ಳುವ ಕಲಾವಿದೆಯರ ಬದುಕಿನ ವಿವರಗಳು ಅವರ ವಾಸ್ತವ ಬದುಕಿಗೆ ಹಿಡಿದ ಕನ್ನಡಿಯಾಗಿದೆ. ಜೀವನಾಧಾರಕ್ಕಾಗಿಯೇ ಕಲೆಯನ್ನು ನಂಬಿಕೊಂಡಿರುವ ಈ ಮಹಿಳೆಯರ ಅನುಭವಗಳ ಹತ್ತು ಹಲವಾರು ಆಯಾಮಗಳನ್ನು, ಅವುಗಳ ತಳದಲ್ಲಿ ಕೆಲಸ ಮಾಡುವ ಶೋಷಿತ ಮುಖಗಳನ್ನು ಪುರುಷ ಕಲಾವಿದರ ಅನುಭವಗಳ ಜೊತೆಗೆ ತೌಲನಿಕವಾಗಿ ಅಧ್ಯಯನ ನಡೆಸಿರುವ ಡಾ.ಶೈಲಜ ಶೋಷಿತ ವರ್ಗದ ಕಲಾವಿದೆಯರ ಬದುಕಿನ ಅನಾವರಣ ಮಾಡುತ್ತಲೇ ದೇಸಿ ಬೇರುಗಳ ಹುಡುಕಾಟಕ್ಕೆ ಶ್ರಮಿಸಿದ್ದಾರೆ. ಹೀಗೆ ಮೂಡಿಬಂದ ಒಂದು ಮಾದರಿ ಕನ್ನಡದ ವಿಶಿಷ್ಟ ಮಾದರಿ ಎನಿಸಿಕೊಳ್ಳುವುದು ಅದು ಒಳಗೊಂಡ ಗ್ರಾಮೀಣ ತಳ ಸಮುದಾಯದ ಕಲಾವಿದೆಯರ ಅಂತರಂಗದ ಹುಡುಕಾಟದಿಂದಾಗಿ ಎಂಬುದು ಮುಖ್ಯವಾಗುತ್ತದೆ.*

*–ಚಂಪಾ*

### ಪದಕೋಶ

**ಗುರುಪ್ಯಾಲಾ :** ಹರದೇಶಿ–ನಾಗೇಶಿ ಹಾಡು ಕಲಿಯ ಬಯಸುವ ಹುಡುಗನಿಗೆ ಗುರುಪ್ಯಾಲಾ ದೀಕ್ಷೆಯನ್ನು ನೀಡಲಾಗುತ್ತದೆ. ಒಂದು ಒಳ್ಳೆಯ ಮುಹೂರ್ತ ನೋಡಿ, ಗುರು–ಶಿಷ್ಯರಿಬ್ಬರನ್ನೂ ಮದುಮಕ್ಕಳಂತೆ ಕಂಬಳಿಯ ಮೇಲೆ ಸಾಸಕ್ಕಿ ಹಾಕಿ ಕೂಡಿಸುತ್ತಾರೆ. ಒಂದು ಲೋಟ ಹಾಲಿನಲ್ಲಿ ಒಣ ದ್ರಾಕ್ಷಿ, ಗೋಡಂಬಿ, ಕಲ್ಲುಸಕ್ಕರೆ ಹಾಕಿ ಗುರುವಿಗೆ ಕೊಡುತ್ತಾರೆ. ಅದನ್ನು ಮಂತ್ರಿಸಿದ ಗುರು ತಾವು ಅರ್ಧ ಕುಡಿದು ಶಿಷ್ಯನಿಗೆ ಅರ್ಧ ಕೊಡುತ್ತಾರೆ. ಗುರುವಿನ ಎಂಜಲು ಹಾಲನ್ನು ಕುಡಿದಾಗ ಶಿಷ್ಯನಾಗುತ್ತಾನೆ. ಇದಕ್ಕೆ 'ಹಸ್ತಿಕ್ ಆಗುವುದು' ಎಂದು ಕೂಡ ಹೇಳುತ್ತಾರೆ.

**ಗೊಳ್ಳು ಒಗೆಯುವುದು:** ಕುಸುಬೆ ಎಣ್ಣೆಯನ್ನು ತೆಗೆಯುವಾಗ ಉಳಿದ ಜೊಳ್ಳನ್ನು 'ಗೊಳ್ಳು' ಎಂದು ಕರೆಯುವರು. ಹಾಡಿಕೆಯುವರ ಹಾಡು ಪ್ರೇಕ್ಷಕರಿಗೆ ಇಷ್ಟವಾದರೆ ಹಾಡುಗಾರರ ಮೇಲೆ ಕುಸುಬಿಯ ಜೊಳ್ಳನ್ನು ಒಗೆಯುವರು. ಇದಕ್ಕೆ 'ಗೊಳ್ಳು ಒಗೆಯುವುದು' ಎಂದು ಹೇಳುವರು. ಈ ಗೊಳ್ಳನ್ನು ಪುರುಷ ಹಾಡುಗಾರರಿಗಿಂತ ಮಹಿಳಾ ಹಾಡುಗಾರರ ಮೇಲೆ ಹೆಚ್ಚಾಗಿ ಚೆಲ್ಲುವರು.

**ಚಾಜ :** ಹಾಡಿಕೆಗೆ ಬರುವ ಆಹ್ವಾನವನ್ನು 'ಚಾಜ' ಎನ್ನುವರು. ಚಾಜದ ಅರ್ಥದಲ್ಲಿಯೇ 'ವಿಳ್ಳೇವು' ಪದ ಬಳಕೆಗೊಳ್ಳುತ್ತದೆ. ಹಾಡಿಕೆಗೆ ಬರುವ ಆಹ್ವಾನವನ್ನು ಒಪ್ಪಿಕೊಳ್ಳುವುದಕ್ಕೆ 'ಚಾಜ ಹಿಡಿಯುವುದು' ಎನ್ನುವರು. ಹಾಡುಗಾರರಿಗೆ ಆಹ್ವಾನಿಸಲು ಬಂದವರು ಹಾಡಿಕೆಗಾಗಿ ಬರುವ ಖರ್ಚು–ವೆಚ್ಚವನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂಗಡ ಹಣವನ್ನು ಎಲೆ ಅಡಿಕೆಯ ಜೊತೆಯಲ್ಲಿ ಕೊಡುವರು. ಹಾಡಿಕೆಗೆ ಆಹ್ವಾನಿಸಿದವರು 'ಚಾಜ ಕೊಡುವುದು' ಎಂದು ಹೇಳಿದರೆ; ಪಡೆದುಕೊಳ್ಳುವವರು 'ಚಾಜ ಹಿಡಿಯುವುದು,' 'ವೀಳ್ಯೆ ಹಿಡಿಯೋದು,' 'ಎಲಿ ಹಿಡಿಯೋದು' ಎಂದು ಹೇಳುವರು.

**ಜನ ಮೆಚ್ಗಿ :** 'ಜನಪ್ರಿಯತೆ' ಎನ್ನುವ ಅರ್ಥದಲ್ಲಿ ಈ ಪದವನ್ನು ಹಾಡುಗಾರರು ಬಳಸುತ್ತಾರೆ. "ಹಾಡ್ಕಿಗೂ ಜನಮೆಚ್ಗಿ ಬಂದೈತಿ" ಎನ್ನುತ್ತಾರೆ. ಜನರಿಗೆ ಇಷ್ಟವಾಗುವಂತೆ ಅಥವಾ ಜನರ ಅಪೇಕ್ಷೆಗೆ ಅನುಗುಣವಾಗಿ ಧಾಟಿ ಬದಲು ಮಾಡಿಕೊಂಡು ಹಾಡುತ್ತಾರೆ. ಹರದೇಶಿ–ನಾಗೇಶಿ ಹಾಡುಗಳ ಸಾಂಪ್ರದಾಯಿಕ ಧಾಟಿಯನ್ನು ಬದಲಿಸಿಕೊಂಡು, ಸಿನಿಮಾ ಹಾಡುಗಳ ಶೈಲಿಯಲ್ಲಿ ಹಾಡುವುದನ್ನು 'ಜನ ಮೆಚ್ಗಿ' ಎನ್ನುತ್ತಾರೆ.

**ತುರಸಿಲೆ ಹಾಡೋದು:** ಜೋಶ್‌ನಿಂದ ಹಾಡುವುದಕ್ಕೆ ತುರಸಿಲೆ ಹಾಡೋದು ಎನ್ನುವರು.

**ದಪ್ಪಿನ ಪದ :** ಹರದೇಶಿ–ನಾಗೇಶಿ ಹಾಡುಗಳನ್ನು 'ದಪ್ಪಿನ ಪದ' ಎಂದು ಕರೆಯುವರು. ಹಾಡುಗಾರರು ದಪ್ಪು ಬಡಿಯುತ್ತ ಹಾಡುವುದರಿಂದ ಇವುಗಳಿಗೆ 'ದಪ್ಪಿನ ಪದಗಳು' ಎನ್ನುವ ಹೆಸರು ಬಂದಿರಬೇಕು. ಈ ಪದ ಜನಸಾಮಾನ್ಯರಲ್ಲಿ ಹೆಚ್ಚು ಬಳಕೆಯಲ್ಲಿದೆ. ಇದಕ್ಕೆ ದಪ್ಪಿನ ಹಾಡು ಎನ್ನುವ ಪದ ಕೂಡ ಬಳಕೆಯಲ್ಲಿ ಇದೆ.

**ಪಟ್ಟಿ ಕೊಡತಾರು :** ದೇವರೆದುರಿಗೆ ಒಡೆದ ತೆಂಗಿನ ಕಾಯಿಯ ಹೋಳುಗಳನ್ನು 'ಪಟ್ಟಿ' ಎಂದು ಹಾಡಿಕೆಯವರು ಕರೆಯುವರು. ಹಾಡಿಕೆ ಕಲಿತ ಆರಂಭದಲ್ಲಿ ಚಾಜ ಪಡೆದುಕೊಳ್ಳದೇ ಹಾಡಿಕೆಗೆ ಹೋಗುತ್ತಾರೆ. ಇಂಥವರಿಗೆ ಜಾತ್ರೆ ನಡೆಸುವವರು ಹಾಡಿಕೆ ಮಧ್ಯದಲ್ಲಿ ಹಾಡಲು ಅವಕಾಶ ಕೊಡುತ್ತಾರೆ. ಹೀಗೆ ಹಾಡಿದವರಿಗೆ ದೇವರೆದುರಿಗೆ ಒಡೆದ ತೆಂಗಿನ ಕಾಯಿಯ ಒಂದು ಹೋಳಿನಲ್ಲಿ ಐವತ್ತು ಇಲ್ಲವೆ ನೂರು ರೂಪಾಯಿ ಇಟ್ಟು ಕೊಡುತ್ತಾರೆ. ಹೀಗೆ ಕೊಡುವವರು ಹಾಡುಗಾರರಿಗೆ ಒಳ್ಳೆಯದಾಗಲಿ ಎಂದು ಆಶೀರ್ವದಿಸಲಾಗಿದೆ ಎಂದು ಭಾವಿಸುತ್ತಾರೆ. ತೆಂಗಿನ ಹೋಳನ್ನು ಪಡೆಯುವವರು ಅದನ್ನು ಅವಮರ್ಯಾದೆ ಎಂದು ಭಾವಿಸಿ "ತಿರಕರಿಗೆ ಕೊಟ್ಟಂಗ ಕೈಯಾಗ ಪಟ್ಟಿ ಕೊಡತಾರು" ಎಂದು ಹೇಳುತ್ತಾರೆ.

ಹಾಡಿಕೆಯವರಾಗಿ ರೂಪುಗೊಳ್ಳಲು ಸಾಕಷ್ಟು ಪರಿಶ್ರಮದ ಅವಶ್ಯಕತೆ ಇದೆ. ಮೊದಲಿಗೆ, ಕಲಾದೀಕ್ಷೆ. ಈ ಹಾಡಿಕೆಯ ಪ್ರಕಾರದಲ್ಲಿ ಪುರುಷರು, ಮಹಿಳೆಯರು ಇಬ್ಬರೂ ಇರುವುದರಿಂದ ಇಬ್ಬರಿಗೂ ದೀಕ್ಷೆ ನೀಡುತ್ತಾರೆ. ಈ ದೀಕ್ಷಾಚರಣೆಯ ಬಗ್ಗೆ ವಿಭಿನ್ನತೆ ಇದ್ದರೂ, ಗಣಿಯಾರದ ರೇಣುಕಾಬಾಯಿಯು "ನಾನು ಡೊಡ್ಡಾಕಿ ಆಗಿಂದ ನಮ್ಮ ಮನಿಗೆ ನಮ್ಮ ಜಾತಿ ಗುರುಗಳನ್ನು ಕರಕೊಂಡು ಬಂದ್ರು, ಹಾಡ್ಯಾಗಿ ಹಚ್ಚಿದ್ರು, ದಪ್ಪು ಪೂಜೆ ಮಾಡಿಂದ ಹಾಡ್ಕಿ ಕಲಸಾಕ ಚಾಲು ಮಾಡಿದ್ರು, ಅವತ್ತು .... ಪೂಜಾ ಮಾಡಾಕ್ಹತ್ತಿದಕಿ ಇವೊತ್ತಿಗೂ ದಪ್ಪಿಗಿ ಪೂಜೆ ಇಲ್ದ ಊಟ ಮಾಡಂಗಿಲ್ಲ, ಹೊರಗ ಹೋಗಂಗಿಲ್ಲ." ಎಂದು ಹೇಳುತ್ತಾಳೆ. ದೀಕ್ಷೆ ತೆಗೆದುಕೊಳ್ಳುವುದು ಅಂದರೆ ತಮ್ಮ ಸರ್ವಸ್ವವನ್ನು ಕಲೆಗಾಗಿ ಧಾರೆ ಎರೆಯುವುದಾಗಿರುತ್ತದೆ. ಆದರೆ, ಈ ದೀಕ್ಷಾಚರಣೆ ಅಥವಾ 'ಗುರುಪ್ಯಾಲಾ' ಆಚರಣೆ ಹೆಚ್ಚು ಹೆಚ್ಚು ಪುರುಷ ಕೇಂದ್ರಿತವಾಗುತ್ತಿದೆ. ಹಾಡಿಕೆ ಮಹಿಳೆಯರಲ್ಲಿ ಕೆಲವರನ್ನು ಹೊರತು ಪಡಿಸಿದರೆ ಹೆಚ್ಚಿನವರು ಜೋಗತಿಯರು, ಇಲ್ಲವೆ ಮುರುಳಿಯರು ಇದ್ದಾರೆ. ಇವರು ಹರದೇಶಿ–ನಾಗೇಶಿ ಪುರುಷ ಹಾಡುಗಾರರಂತೆ ಸಂಗೀತ ದೀಕ್ಷೆ ತೆಗೆದುಕೊಳ್ಳಲು ಆಗುವುದಿಲ್ಲ. ಯಾಕೆಂದರೆ, ಗುರುಪ್ಯಾಲ ದೊರೆಯುವುದು ಕೇವಲ ಪುರುಷ ಹಾಡುಗಾರರಿಗೆ ಮಾತ್ರ. ಈ ಪದ್ಧತಿಯಲ್ಲಿ ಗುರು ಗಂಡನಾದರೆ, ಶಿಷ್ಯ ಹೆಂಡತಿಯಾಗುತ್ತಾನೆ. ಜೋಗತಿ ಸಂಪ್ರದಾಯದಲ್ಲಿ 'ಗಂಡ' ಎನ್ನುವ ಪರಿಕಲ್ಪನೆಗೆ ಸ್ಥಾನವಿಲ್ಲ. ಇವರನ್ನು ದೇವಿಯ ಮಕ್ಕಳು ಎಂದೇ ಗುರುತಿಸುತ್ತಾರೆ. ದೇವಿಯ ಮಕ್ಕಳೆಂದು ಗುರುತಿಸಿಕೊಳ್ಳುವ 'ಜೋಗತಿ'ಯರು ಕಲಾದೀಕ್ಷೆಯ ಹೆಸರಿನಲ್ಲಿ ಹೆಂಡತಿಯಾಗಲಾರದ ಸಾಂಸ್ಕೃತಿಕ ಇಕ್ಕಟ್ಟನ್ನು ಎದುರಿಸುತ್ತಾರೆ. ಒಂದು ಕಲೆಯ ಪ್ರಕಾರದಲ್ಲಿ ಪುರುಷ ಕೇಂದ್ರಿತ ಮೌಲ್ಯಗಳನ್ನು ತುಂಬಿ, ಮಹಿಳೆಯರನ್ನು ಅಪನಂಬಿಕೆಯಿಂದಲೇ ನೋಡುವ ಪ್ರವೃತ್ತಿ ಬೆಳೆದುಬಂದಿದ್ದು, ಹಾಡಿಕೆಯ ಸಂದರ್ಭದಲ್ಲಿ ಮಹಿಳೆ ಹೆಚ್ಚುಗಾರಿಕೆ ತೋರಿಸಿದರೆ, ಅಂತಿಮವಾಗಿ ಅವಳ ಶೀಲವನ್ನು ಸಾರ್ವಜನಿಕವಾಗಿ ದೂಷಿಸುವ ನೀಚತನವು ಮಹಿಳಾ ಹಾಡಿಕೆಯವರನ್ನು ಸಾಕಷ್ಟು ಮಾನಸಿಕವಾಗಿ ಜರ್ಜರಿತಗೊಳಿಸುತ್ತದೆ. ಈ ಹಾಡಿಕೆಯವರಿಗೆ ದೀಕ್ಷಾಚರಣೆಯ ನಂತರ ತಾಲೀಮು ಬಹಳ ಮುಖ್ಯವಾಗುತ್ತದೆ. ಈ ತಾಲೀಮಿನಲ್ಲಿ ಕಲಿಕಾ ಹಂತದ ತಾಲೀಮು ಹಾಗೂ ವೃತ್ತಿ ಹಂತದ ತಾಲೀಮುಗಳ ಸತತ ಅಭ್ಯಾಸ ನಡೆಸಬೇಕಾಗುತ್ತದೆ. ಈ ತಾಲೀಮು ಹೇಗಿರುತ್ತೆಂಬುದಕ್ಕೆ ಹಲವು ನಿದರ್ಶನಗಳನ್ನು ಪುಸ್ತಕದಲ್ಲಿ ನೀಡಲಾಗಿದೆ. (ಈ ಹಾಡಿಕೆಯಲ್ಲಿ ಪ್ರಾದೇಶಿಕ ಭಿನ್ನತೆಯೂ ಸೇರಿದೆ. ಅಂದರೆ ಮುಧೋಳ, ಜಮಖಂಡಿ, ಮಹಾಲಿಂಗಪೂರ ಮುಂತಾದೆಡೆ ಹರದೇಶಿ–ನಾಗೇಶಿ ಎರಡು ಹಾಡುಗಳನ್ನು ಹೆಣ್ಣುಮಕ್ಕಳೇ ಹಾಡುತ್ತಾರೆ. ಗುಲ್ಬರ್ಗಾ, ವಿಜಾಪುರ, ಸೊಲ್ಲಾಪುರಗಳಲ್ಲಿ ಹೆಂಗಸರು, ಗಂಡಸರು ಇಬ್ಬರೂ ಹಾಡುತ್ತಾರೆ. ಹೆಣ್ಣುಮಕ್ಕಳಿಗೆ ಹೆಣ್ಣುಮಗಳೇ ಎದುರಾಗಿ ಹರದೇಶಿ–ನಾಗೇಶಿ ಹಾಡುಗಳನ್ನು ಹಾಡುವ ಮೇಳಗಳಿಗೆ 'ಚೌಡಕಿ ಮೇಳ' ಎಂತಲೂ, ಸ್ತ್ರೀ ಪುರುಷರು ಎದುರಾಗಿ ಹಾಡುವ ದಪ್ಪಿನ ಹಾಡುಗಳಿಗೆ ದಪ್ಪಿನ ಹಾಡುಗಳು, ಶಾವರಿಕೆ ಹಾಡುಗಳು ಎಂತಲೂ ಕರೆಯುತ್ತಾರೆ.)


ಕಂಬಾಗಿ ಹನುಮವ್ವ ಮತ್ತು ಲೇಖಕಿ

ಹರದೇಶಿ–ನಾಗೇಶಿ ಹಾಡುಗಾರಿಕೆಯು ಇಂದು ವೃತ್ತಿಯಾಗಿ ಗುರುತಿಸಿಕೊಂಡಿದೆ. ಹೀಗಾಗಿ, ವೃತ್ತಿಹಂತದ ತಾಲೀಮು ಅತ್ಯಗತ್ಯ. ಯಾಕೆಂದರೆ ಈ ಕಲಾಪ್ರಕಾರ ಕೇಳುಗ ಸಮೂಹದ ಪ್ರಚೋದನೆಯಿಂದ ಬೆಳೆಯುತ್ತಲೇ ಹೋಗುತ್ತಿದೆ. ಅದರಿಂದ ಒಂದು ರಾತ್ರಿ ಒಂದು ಹಗಲು ಹಾಡಲು ಬರುವಷ್ಟು ಸಾಮಗ್ರಿ ತಮ್ಮಲ್ಲಿದ್ದರೂ ಸಾಲದಾಗುತ್ತದೆ. ಎಲ್ಲ ಕ್ಷೇತ್ರದಲ್ಲಿರುವ ಸ್ಪರ್ಧಾತ್ಮಕತೆ ಇಲ್ಲಿಯೂ ಇದೆ. ಅದಕ್ಕೆ ಶಿವಬೂರದ ಮುತ್ತವ್ವ ಹೀಗೆ ಹೇಳುತ್ತಾಳೆ. "ಒಂದು ಸಲ ಹಾಡಕಿ ವಿದ್ಯಾದಾಗ ಬಿದ್ದೀವಿ ಅಂದ್ರ ಕಲಿಕಿಗಿ ಕೊನಿ ಅನ್ನುದ ಇರಲ್ಲ. ಈ ವಿದ್ಯಾ ಹ್ಯಾಂಗದ ಅಂದ್ರ ಸಾಯುತನಕ ನಮ್ಮನ್ನ ತನ್ನ ಗುಂಗಿನ್ಯಾಗ ಇಟ್ಟಕೊತೈತಿ, ಬ್ಯಾರೆ ಕಡೆ ಚಿತ್ತಾ ಹಾಯ್ಸಕೊಡುದಿಲ್ಲ. 'ದೇವದಾಸಿ ಮುತ್ತವ್ವ' ಹೋಗಿ 'ಹಾಡಕಿ ಮುತ್ತವ್ವ' ಅನಿಸಿಕೋಬೇಕಿದ್ರೆ ಸುಮ್ಮನ ಐತೇನು? ಇಡೀ ಜೀವನಾನ ಹಾಡಿಕಿಗಿ ತೇಯ್ದಿನಿ. ಅದು ನನಗ ಮರ್ಯಾದೆ ತಂದುಕೊಟ್ಟೈತಿ. ಈಗ ನನಗ ಮೂರ ಇಪ್ಪತ್ತರ ಮ್ಯಾಲ (ಅರವತ್ತು ವರ್ಷದ ಮೇಲೆ) ವಯಸ್ಸಾಗೈತಿ, ಈಗಲೂ ಸಾಹಿತ್ಯ ತಂದು ಹಾಡಕಿ ಕಲಿತೇನಿ. ನಮ್ಮ ಕವಿಗಳು ಹೊಸ ಹೊಸ ಹಾಡು ಕಟ್ಟತಿರತಾರು.

ಪ್ರತಿಸಲಾನೂ ಹೊಸ ಸವಾಲು ಎದುರಾಗ್ತದ. ಅದಕ್ಕ ಉತ್ತರಿಸಬೇಕಂದ್ರ ಕವಿ ಕಟ್ಟಿದ ಹೊಸಹಾಡು ಗೊತ್ತಿರಬೇಕಾಗ್ತೈತಿ. ಸೊಲ್ಲಾಪುರದಾಗ ನಮ್ಮಜ್ಜಿ ಮನಿಯಾಗ ಬೆಳೆದು ದೊಡ್ಡವಳಾದೆ. ಅದಕ್ಕs ಮರಾಠಿ ಬರ್ತದೆ. ಲಿಪಿ ಮರಾಠಿ, ಸಾಹಿತ್ಯ ಕನ್ನಡದ್ದು. ನನ್ನ ಮೊಮ್ಮಕ್ಕಳು ಇಲ್ಲೇ ವಿಜಾಪುರದಾಗ ಓದ್ತಾರು. ಅವರಿಗೆ ಕನ್ನಡ ಬರ್ತದ. ಕವಿಗಳಿಂದ ಹೊಸ ಸಾಹಿತ್ಯ ತಂದು ಮೊಮ್ಮಕ್ಕಳ ಕಡಿಯಿಂದ ಓದಿಸಿಕೊಂಡು, ಅದನ್ನ ಮರಾಠಿ ಲಿಪಿಗೆ ತಂದ್ಕೊಂಡು ಹಾಡಕಿ ಕಲಿತಿರತೀನಿ. ನಮ್ಮ ಹಾಡಕಿ ಕ್ಷೇತ್ರ ಸಮುದ್ರ ಇದ್ಹಂಗ. ಎಷ್ಟು ಕಲಿತರೂ ನಮಗ ಅದು 'ನಿಂಗ ಏನೂ ಗೊತ್ತಿಲ್ಲ ಅಂತಿರ್ತದ.'

ಇಂತಹ ಹಾಡಿಕೆ ಹೆಣ್ಣುಮಕ್ಕಳು ಅಲೆಮಾರಿಗಳಾಗ ಬೇಕಾಗಿರುವುದು ವೃತ್ತಿಪರತೆಯ ಅನಿವಾರ್ಯ. ಕರೆದಲ್ಲಿಗೆ ಹೋಗಬೇಕು, ಹಾಡಕಿ ಮಾಡಬೇಕು ಹೀಗಾಗಿ ಈ ಹಾಡಕಿ ಮಹಿಳೆಯರು ತಮ್ಮ ಜೊತೆಗಾರನ ಆಯ್ಕೆಯಲ್ಲಿ ಎಚ್ಚರ ವಹಿಸಬೇಕಾಗುತ್ತದೆ. ಅಲ್ಲದೇ, ಊರಿಂದ ಊರಿಗೆ ಕಾರ್ಯಕ್ರಮಕ್ಕಾಗಿ ಹೋಗುವುದರಿಂದ ಎಂತೆಂತಹ ಪರಿಸ್ಥಿತಿಯನ್ನೋ ಎದುರಿಸಬೇಕಾಗಿರುತ್ತದೆ. ಆ ದೃಷ್ಟಿಯಲ್ಲಿ ಒಬ್ಬ 'ಗಂಡು' ಇದ್ದರೆ ಒಳ್ಳೆಯದಾಗುತ್ತದೆ. ಹಾಡಕಿಯವರನ್ನು ಸಮಾಜ 'ದೇವದಾಸಿ'ಯರೆಂದೇ ನೋಡುತ್ತದೆ. ಇದರಿಂದ ಹಾಡಕಿ ಮಹಿಳೆಯರು ಪ್ರತಿಕ್ಷಣವೂ ಎಚ್ಚರಿಕೆಯಿಂದಲೇ ಇರಬೇಕಾಗುತ್ತದೆ. ಇವರನ್ನು ದೈಹಿಕವಾಗಿ, ಮಾನಸಿಕವಾಗಿ ತೀವ್ರ ನೋವಿಗೆ ಗುರಿಮಾಡುವ ಪುರುಷ ಪ್ರಧಾನ ಮೌಲ್ಯವನ್ನು ನವಿರಾಗಿ ತಿರಸ್ಕರಿಸುವುದರೊಂದಿಗೆ, ತನ್ನನ್ನು ತಾನು ಜೋಪಾನ ಮಾಡಿಕೊಳ್ಳುವುದು ಮುಖ್ಯವಾಗುತ್ತದೆ. ಅದರಿಂದ, ಹೆಚ್ಚಾಗಿ ಹಾಡಕಿಯವರು ವೃತ್ತಿನಿರಂತತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಪುರುಷ ಕಲಾವಿದರೊಂದಿಗೆ ಸಂಬಂಧಇಟ್ಟುಕೊಳ್ಳಲು ಬಯಸುತ್ತಾರೆ. ಇದು ವ್ಯಾವಹಾರಿಕವಾಗಿಯೂ ಅನುಕೂಲವಾಗುವುದನ್ನು ಅಡಕಗೊಂಡಿರುತ್ತದೆ. ಈ ಹಾಡಿಕೆಯವರನ್ನು ಆಮಂತ್ರಿಸುವವರು ಮುಂಗಡ ನೀಡುತ್ತಾರೆ. ಇದನ್ನು 'ವೀಳ್ಯೆ ಹಿಡಿಯುವುದು' ಎನ್ನುತ್ತಾರೆ. ಬಹಳಷ್ಟು ಹಾಡಕಿಯವರು ಇಡೀ ರಾತ್ರಿ ನಿಂತು ಹಾಡಿ, ದುಡಿಯುವುದು ತಮ್ಮ ಭೋಗಲಾಲಸೆಗಳಿಗಲ್ಲ, ಬದಲಿಗೆ, ಸಮಸ್ತ ಕುಟುಂಬದ ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ಅನಕ್ಷರಸ್ಥರು, ಪ್ರಾಥಮಿಕ ಹಂತದ ವಿದ್ಯೆ ಕಲಿತ ಇವರಲ್ಲಿ ತಮ್ಮ ವೃತ್ತಿಪರತೆ, ಜವಾಬ್ದಾರಿಗಳ ಲೌಕಿಕತೆಯನ್ನು ತಮ್ಮದಾಗಿಸಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ.

**ಕಲೆಯ ಹಿಂದಿನ ಕ್ರೌರ್ಯ :** ಹಾಡಕಿ ಕಲಾವಿದೆಯರು ವೃತ್ತಿ ಸಂಬಂಧಿ ಅಲೆಮಾರಿತನದ ಬದುಕು ಸಾಗಿಸುತ್ತಾರೆ. ಹಲವೆಡೆ ಹಲವು ಕಾರ್ಯಕ್ರಮಗಳಲ್ಲಿ ಪ್ರೇಕ್ಷಕರು ಹಾಡಿಕೆ ಮಹಿಳೆಯ ಧ್ವನಿಗೆ ಮನಸೋತರೆ, ಬಹಳಷ್ಟು ಗಂಡಸರು ಕಲಾಕಾರಳನ್ನು ಆಸ್ವಾದಿಸುತ್ತಾರೆ. ಇದರಿಂದಾಗಿ, ಇಲ್ಲಿ ಹಲವು ಸಾಮಾಜಿಕ ಸಮಸ್ಯೆಗಳು ತಲೆದೋರುತ್ತವೆ. ಇದನ್ನು ಮೂರು ನೆಲೆಯಲ್ಲಿ

### ಪದಕೋಶ

**ಪಂಥಾ ಕಟ್ಟೋದು:** ಹಣವನ್ನು ಅಥವಾ ಚಿನ್ನ ಇಲ್ಲವೆ ಬೆಳ್ಳಿಯಂತಹ ಬೆಲೆ ಬಾಳುವ ವಸ್ತುವನ್ನು ಪ್ರೇಕ್ಷಕರು ಮೈಕಿಗೆ ಕಟ್ಟುತ್ತಾರೆ ಹಾಗೂ ಸವಾಲು ಹಾಕುತ್ತಾರೆ. ಸವಾಲನ್ನು ಬಿಡಿಸಿ ಪಂಥಕ್ಕೆ ಇಟ್ಟಂಥವುಗಳನ್ನು ಪಡೆದುಕೊಳ್ಳಲು ಹಾಡುಗಾರರಿಗೆ ಸೂಚಿಸುತ್ತಾರೆ. ಇದಕ್ಕೆ 'ಪಂಥಾಕಟ್ಟೋದು' ಎನ್ನುತ್ತಾರೆ. ಪಂಥ ಕಟ್ಟುವವರು ಪ್ರೇಕ್ಷಕರೇ ಆಗಿರುತ್ತಾರೆ.

**ಬಾಯಿತೊಂಡಿ:** ಮೌಖಿಕ ಹಿನ್ನೆಲೆಯನ್ನು 'ಬಾಯಿತೊಂಡಿ' ಎಂದು ಹೇಳುತ್ತಾರೆ.

**ಬಿದಾಯಿ :** ಪ್ರೇಕ್ಷಕರು ಹಾಡುಗಾರರ ಹಾಡಿಕೆಗೆ ಮೆಚ್ಚಿ ಕೊಡುವ ಬಹುಮಾನವನ್ನು 'ಭಕ್ಷೀಸು' 'ಬಿದಾಯಿ' ಎನ್ನುತ್ತಾರೆ.

**ಮಾಸ್ತರ್ :** ಚೌಡಿಕೆಯಲ್ಲಿ ಹರದೇಶಿ–ನಾಗೇಶಿ ಹಾಡುಗಳನ್ನು ಹಾಡುವ ಮಹಿಳೆಯರು, ತಮ್ಮ ಜೊತೆಯಲ್ಲಿ ಒಡಪು ಬಿಚ್ಚಿ ಹೇಳಲು ವ್ಯಕ್ತಿಯೊಬ್ಬನನ್ನು ಕರೆದುಕೊಂಡು ಹೋಗುತ್ತಾರೆ. ಎದುರು ಹಾಡುಗಾರರಿಂದ ಹಾಗೂ ಪ್ರೇಕ್ಷಕರಿಂದ ಎದುರಾಗುವ ಸವಾಲುಗಳನ್ನು ಬಿಚ್ಚಿ ಹಾಡುಗಾರರಿಗೆ ಹೇಳಿಕೊಡುವ ವ್ಯಕ್ತಿಯನ್ನು 'ಮಾಸ್ತರ್' ಎಂದು ಕರೆಯುವರು. ಚೌಡಿಕೆಯಲ್ಲಿ ಹರದೇಶಿ–ನಾಗೇಶಿ ಹಾಡುವ ಮಹಿಳೆಯರು 'ಮಾಸ್ತರ್'ನನ್ನು ವಿದ್ವಾಂಸನೆಂದೇ ಪರಿಗಣಿಸುತ್ತಾರೆ. ದಪ್ಪಿನ ಪದಗಳನ್ನು ಬರೆಯುವವರನ್ನು 'ಶಾಹಿರ್' ಎಂದು ಕರೆಯುವಂತೆ, ಚೌಡಿಕೆಯಲ್ಲಿ ಹರದೇಶಿ–ನಾಗೇಶಿ ಹಾಡುಗಳನ್ನು ಬರೆಯುವವರನ್ನು 'ಮಾಸ್ತರ್' ಎಂದು ಕರೆಯುವರು. ಹೇಳುವ ಜವಾಬು ದೊಡ್ಡದಿದ್ದರೆ ಮಾಸ್ತರನೇ ವೇದಿಕೆಗೆ ಬರುತ್ತಾನೆ; ಚುಟುಕಾಗಿದ್ದರೆ ಹಾಡುಗಾರರಿಗೆ ಹೇಳಿಕೊಡುತ್ತಾನೆ.

**ಮ್ಯಾಳ ಕಟ್ಟೋದು :** ಹರದೇಶಿ ಹಾಗೂ ನಾಗೇಶಿ ಎರಡೂ ಮೇಳದವರಲ್ಲಿ ಯಾರೊಬ್ಬರಿಗೆ ಚಾಜ ಬಂದರೂ ಎದುರು ಹಾಡುಗಾರರನ್ನಾಗಿ ತಮ್ಮನ್ನೇ ಕರೆಯಬೇಕೆಂದು ಎರಡೂ ಮೇಳದವರು ಸೇರಿ ಮಾತುಕತೆ ಮಾಡಿಕೊಂಡಿರುತ್ತಾರೆ. ಇದಕ್ಕೆ 'ಮ್ಯಾಳ ಕಟ್ಟೋದು' ಎನ್ನುವರು.

### 2. ಅಧ್ಯಯನದ ಹಿಂದಿನ ತಾಕಲಾಟಗಳು

*ಡಾ. ಶೈಲಜರವರು ವ್ಯಕ್ತಪಡಿಸಿರುವ ಅಧ್ಯಯನದ ಹಿಂದಿನ ತಾಕಲಾಟಗಳು ಬಹು ಮುಖ್ಯವಾದ ಪ್ರಶ್ನೆಯನ್ನು ಎತ್ತುತ್ತವೆ. ಅಕೆಡಮಿಕ್ ವಲಯದ ಬೌದ್ಧಿಕ ಜಗತ್ತಿನ ಮಹಿಳೆಯೊಬ್ಬಳು ಶೋಷಿತ ಸಮುದಾಯಕ್ಕೆ ಸೇರಿದ ಕಲಾವಿದೆಯರ ಅಂತರಂಗವನ್ನು ಬಗೆಯುವುದು ಅಷ್ಟು ಸುಲಭವಾದ ಕೆಲಸವೇನಲ್ಲ. ಅಧ್ಯಯನದ ಬದ್ಧತೆಯೊಂದು ಮಾತ್ರ ಇದಕ್ಕೆ ಸಾಕಾಗುವುದಿಲ್ಲ. ಅಕೆಡೆಮಿಕ್ ಶಿಸ್ತಿನ ಮೂಲಕ ಮಾತ್ರ ಇಲ್ಲಿ ಇರುವ ಪ್ರಶ್ನೆಗಳಿಗೆ ಉತ್ತರ ಸಿಗುವುದಿಲ್ಲ. ಹಾಗಾಗಿಯೇ ಇವುಗಳನ್ನು ತಾಕಲಾಟಗಳು ಎಂದು ಹೇಳಬಹುದು. ಅಕ್ಷರ ಲೋಕದ ಶಿಷ್ಟತೆ, ಜಾತಿ, ವರ್ಗದ ಹಿನ್ನೆಲೆಯ ವ್ಯಕ್ತಿತ್ವದ ಮಿತಿಗಳು, ಲಾಭ – ಲೋಭಗಳ ಆಲೋಚನೆಗಳು, ಅಧಿಕಾರದ ಕಲ್ಪನೆಗಳು ಇಂತಹ ಎಲ್ಲದಕ್ಕೂ ಎದುರಾಗಿಸಿ ಬೆಚ್ಚಿಸುವ, ಅಂತರಂಗವನ್ನು ಕಲಕುವ, ಸೂಕ್ಷ್ಮತೆಗಳನ್ನು ಕೆದಕುವಂತಹ ಸವಾಲುಗಳನ್ನು ಇಂತಹ ಅಧ್ಯಯನಗಳು ನಮ್ಮ ಮುಂದೆ ಇಡುತ್ತವೆ. ಡಾ. ಶೈಲಜರವರು ಮುಕ್ತವಾಗಿ ಅಂಥವರ ನೋವು, ಅಪಮಾನಗಳನ್ನು ಬಿಚ್ಚಿ ಇಡುತ್ತಾರೆ. 'ವಕ್ತೃಗಳನ್ನು ನಾನು ಜ್ಞಾನಿಗಳು ಎಂದು ಭಾವಿಸುತ್ತೇನೆ' ಎನ್ನುತ್ತಾರೆ. ಹಾಡಿಕೆ ಹನುಮವ್ವನ ಬಗ್ಗೆ ಹೇಳುತ್ತಾ ಲೇಖಕಿ, 'ಹನುಮವ್ವನು ತೋಟದ ಮನೆ ಬಾಗಿಲು ತೆಗೆದು ಬೆಳಿಗ್ಗೆ ಏಳು ಗಂಟೆಗೆ ಒಳಗೆ ಕರೆದುಕೊಂಡಿದ್ದರೆ, ಸಾಯಂಕಾಲ ನಾಲ್ಕು ಗಂಟೆಗೆ ಅಂತರಂಗದ ಕಿಟಕಿಯನ್ನು ತೆಗೆದು ಮಾತನಾಡತೊಡಗಿದಳು'. [ಪುಟ 2] ಹೀಗೆ ಅಂತರಂಗದ ಬಾಗಿಲನ್ನು ತಟ್ಟುವಲ್ಲಿ ಸಹನೆಯಿಂದ ಕಾಯುವ ಡಾ. ಶೈಲಜ ಹಾಡಿಕೆ ಈರಮ್ಮನ ಆಪ್ತ ಗೆಳತಿಯಾಗುತ್ತಾರೆ. ಸೋಲಾಪುರದ ಮಲ್ಲಿಕಾರ್ಜುನ್ ಹಾಗೂ ಈರವ್ವನ ನಡುವಿನ ನೇರ ಗುದ್ದಾಟದ ಘರ್ಷಣೆಯ ಅರಿವಿದ್ದೂ ಸಹ ಈರವ್ವನ ವೇದನೆಯನ್ನು ಆಲಿಸುತ್ತಾರೆ. ರಾತ್ರಿ ಸುಮಾರು ಒಂದು ಗಂಟೆಗೆ ಲೇಖಕಿ ಹೊರಟು ನಿಂತಾಗ ಈರವ್ವ ಹೇಳುವ ಮಾತು ಮನ ಕಲಕುವಂತಹುದು. "ಇವತ್ತು ರಾತ್ರಿ ಮನಸ್ಸು ನಿರಾಳ [ಹಗುರ] ಅನಸಾಕತ್ತೈತಿ ನೋಡ್ರಿ. ನನ್ನ ಹಡೆದ ಅವ್ವನಿಂದ ಹಿಡ್ದು ಯಾರೊಬ್ಬರೂ ನಿಂದೇನ ಕಷ್ಟ ತಂಗಿ ಅಂತ ಇಚಾರ [ವಿಚಾರ] ಮಾಡಿರ್ಲಿಲ್ಲ. .....ಇವತ್ತ ರಾತ್ರಿ ಇಲ್ಲೆ ವಸ್ತಿ ಮಾಡಬ್ಯಾಡಾ. ಕರ್ನಾಟಕಕ್ಕೆ ಹೋಗಿ ವಸ್ತಿ ಮಾಡು. ಇಲ್ಲಿ ಇನ್ನೊಮ್ಮೆ ಬರಾಕ ಹೋಗಬೇಡ. ಬಂದ್ರೂ ಗುಂಪುಗೂಡಿ ಬರ್ರಿ...." [ಪುಟ 5] ನೋವನ್ನು ಹಂಚಿಕೊಳ್ಳುತ್ತಲೇ, ಗೋಡೆಗೆ ಹಣೆ ಚಚ್ಚಿಕೊಂಡು ಬದುಕ ಸಾಗಿಸುವ ಈರವ್ವ ಹಾಗೂ ಲೇಖಕಿಯ ಮಧ್ಯೆ ಏರ್ಪಟ್ಟಿರುವ ಸೋದರಿತ್ವದ ಎಳೆಯನ್ನೂ ಗಮನಿಸಬೇಕು. ಘರ್ಷಣೆಯ ಬವಣೆಯಲ್ಲಿಯೇ ನಿತ್ಯದ ಬದುಕನ್ನು ಸಾಗಿಸುವ ಈರವ್ವನಿಗೆ ಲೇಖಕಿಗೆ ಅಪಾಯ ಆಗಬಾರದು ಎನ್ನುವ ಕಾಳಜಿ. ಯಾವ ಅಪಾಯ ಇದ್ದರೇನು?. ಈರವ್ವನ ನೋವಿಗೆ ಕಿವಿ ಕೊಡಬೇಕೆನ್ನುವ ಲೇಖಕಿಯ ಹಟ. ಹೀಗೆ ಪುಸ್ತಕದ ಉದ್ದಕ್ಕೂ ಲೇಖಕಿ ಹಾಗೂ ಕಲಾವಿದೆಯರ ನಡುವಿನ ಒಡನಾಟ, ಏರ್ಪಟ್ಟ ಸಂಬಂಧದಿಂದಾಗಿ ಹರದೇಶಿ – ನಾಗೇಶಿ ಕಲಾವಿದೆಯರ ಬದುಕಿನ ಚಿತ್ರಣಕ್ಕೆ ಒಂದು ಸ್ತ್ರೀವಾದಿ ನೋಟ ದೊರಕಿದೆ.*

*–ಚಂಪಾ*

ಗುರುತಿಸಲಾಗಿದೆ. ಅವುಗಳೆಂದರೆ, ಭಾವನಾತ್ಮಕ ದೌರ್ಜನ್ಯಗಳು ಲೈಂಗಿಕ ದೌರ್ಜನ್ಯಗಳು ಹಾಗೂ ಬೌದ್ಧಿಕ ದೌರ್ಜನ್ಯಗಳು. ಲೈಂಗಿಕ ದೌರ್ಜನ್ಯದಲ್ಲಿ ರಂಗದ ಹಿಂದಿನವು ಹಾಗೂ ರಂಗದ ಮೇಲಿನವು ಕೂಡ ಹಾಡಕಿ ಮಹಿಳೆಯರನ್ನು ನಿರಂತರವಾಗಿ ಕಾಡುತ್ತಿರುತ್ತವೆ. ಜೊತೆಗೆ ಹರದೇಶಿ–ನಾಗೇಶಿ ಮಹಿಳಾ ಹಾಡುಗಾರಿಕೆಗೆ ಹಾಡುಗಾರಿಕೆಯು ಸಾಮಾಜಿಕ ಅಪಮಾನವನ್ನು ಸಾಮಾಜಿಕ ಅನಾಥತೆಯನ್ನು ಅತಂತ್ರತೆಯನ್ನು ಸೃಷ್ಟಿಸಿದರೆ, ಹಾಡಿಕೆ ವೃತ್ತಿ ಹಾಗೂ ಹೆಣ್ತನದ ಕಾರಣಗಳು ಹಲವು ಆರೋಗ್ಯ ಸಮಸ್ಯೆಗಳನ್ನು ಹುಟ್ಟು ಹಾಕುತ್ತವೆ. ಅದೆಂದರೆ, 1. ತಾಯ್ತನ, 2. ದೈಹಿಕ ಸಮಸ್ಯೆಗಳು, 3. ಆಹಾರ.

**ತಾಯ್ತನ** : ಹಾಡಕಿಯವರು ಗರ್ಭಿಣಿಯರಾಗಿದ್ದಾಗ ಹಾಗೂ ಬಾಣಂತಿತನದಲ್ಲಿ ಹಲವು ಆರೋಗ್ಯ ಸಮಸ್ಯೆಗಳನ್ನು ಎದುರಿಸುತ್ತಾರೆ. ದೈಹಿಕವಾಗಿ ತಾವು ರೂಢಿಸಿಕೊಂಡಿರುವ ವೃತ್ತಿಯ ಬೇಡಿಕೆಗಳಿಂದಾಗಿ ಹಲವು ರೀತಿಯ ತೊಂದರೆಗಳನ್ನು ಅನುಭವಿಸುವುದು ಅನಿವಾರ್ಯ. ಉದಾ: "ತಾಯಿ ಈಗ ನನ್ನ ವಯಸ್ಸು ಅರವತ್ತೈದು. ಈಗ್ಲೂ ಹಾಡ್ತೀನಿ. ವಯಸ್ಸಿನ್ಯಾಗ ಹಾಡಕಿ ಸಲುವಾಗಿ ಒಂದ್ಹೊತ್ತು ಮಾತ್ರ ಊಟ ಮಾಡೋ ಅಭ್ಯಾಸಾ ಮಾಡ್ಕೊಂಡಿನಿ. ಊಟ ಕಟ್ಟಿ, ಕಟ್ಟಿ ಹಾಡಿ ಹಾಡಿ ಕರುಳು ಬತ್ತಿದಾವು. ಗ್ಯಾಸ್ ಹಿಡದದ ತಂಗಿ, ಅದಕ್ಕಂತ ದಿನಾಲೂ ಗುಳಗಿ ತಗೋತಿನಿ ಎಂದು ಸಾವಳಗಿ ನಿಂಬವ್ವ ನಿವೇದಿಸುತ್ತಾರೆ. ಹಾಡಕಿ ಹಾಡುವವರಿಗೆ ತಮ್ಮ ಧ್ವನಿಯನ್ನು ಕಾಪಾಡಿಕೊಳ್ಳುವುದು ಅತಿ ಮುಖ್ಯ. ಅದಕ್ಕಾಗಿ ಅವರ ಆಹಾರದ ಕ್ರಮವೂ ಭಿನ್ನ. "ನಮಗ ಹೋಳಿಗಿ ಬಂಗಾರ (ಅಲಭ್ಯ ಎಂಬರ್ಥದಲ್ಲಿ), ಜಾತ್ರಿಗಿ ಹಾಡಕಿಗೆ ಹೋದ್ರು ಅವ್ರು ಹುಗ್ಗಿ, ಹೋಳಿಗಿ ಕೊಟ್ರು ತಿನ್ನಂಗಿಲ್ಲ. ಅನ್ನ ತಂಪು ಅಂತಾರ, ಅದಕ್ಕ ತಿನ್ನಂಗಿಲ್ಲ, ಹುಳಿ ತಿನ್ನುವಂಗಿಲ್ಲ. ಜಡ್ಡಿನವರು ಪತ್ತೆ ಮಾಡಿದಾಗ ನಾವು ಪತ್ತೆ (ಪಥ್ಯೆ) ಮಾಡಬೇಕು. ಚಾ ತಗೋತಿವಿ, ಎಲಿ ಅಡಕಿ ತಿಂತೀವಿ" ಎಂದು ತಮ್ಮ ಆಹಾರಕ್ರಮದ ಬಗ್ಗೆ ಜನವಾಡದ ಬುಧ್ಧವ್ವ ಹೇಳುತ್ತಾರೆ.

ಹಾಡಕಿಯವರು, ಆರ್ಥಿಕವಾಗಿ ಹಿಂದುಳಿದವರು ಬಡತನದ ಕ್ರೂರತೆಯನ್ನು ಅರಗಿಸಿ ಕೊಂಡವರು. ಈ ಬಡತನ ಅವರಿಗೆ ಅಪಮಾನ, ಅನಾಥತೆಯ ಪ್ರಜ್ಞೆಯನ್ನು ಬೆಳೆಸಿದೆ. ಬಡತನ ಎಷ್ಟು ತೀವ್ರವಾಗಿ ಕಾಡಿದೆಯೆಂದರೆ "ಶಿವನ... ಬಡತನ ಕೊಡಬ್ಯಾಡ, ಹೆಣ್ಣಾಗಿ ಹುಟ್ಟಿಸಬೇಡ ಅಂತ ನಿತ್ಯ ಬೇಡ್ಕೊತಿದ್ವಿ" ಎನ್ನುತ್ತಾರೆ.

ಇದಲ್ಲದೇ, ಆರಂಭದ ವೃತ್ತಿಜೀವನದ ಸಮಸ್ಯೆಗಳು, ಗುರುಗಳಲ್ಲಿ ಜೀತಕ್ಕಿರುವುದು, ತಮ್ಮ ಉಡುಪು ಹಾಗೂ ವೃತ್ತಿ ಮರ್ಯಾದೆ, ಹಾಡುಗಾರರ ಕೌಟುಂಬಿಕ ಕಲಾ ಹಿನ್ನೆಲೆ, ಸ್ವತಂತ್ರ ವೃತ್ತಿ ನಿರ್ವಹಣೆ, ಮೇಳ ಕಟ್ಟುವುದು, ಮೇಳ ಉಳಿಸಿಕೊಳ್ಳುವುದು, ಜಾತ್ರೆಗಳು ಹಾಡಿಕೆ ಅವಕಾಶಗಳು, ಮ್ಯಾಳ ಕಟ್ಟೋದು, ಚಾಜ, ಭಕ್ಷೀಸು, ದೈಹಿಕ ದಣಿವು, ಖಾಸಗಿ ಹಾಡಿಕೆ ಸರಕಾರಿ ಹಾಡಿಕೆ, ಧ್ವನಿ ಮುದ್ರಣ, ಮಾರುಕಟ್ಟೆ ಮತ್ತು ಹರದೇಶಿ –ನಾಗೇಶಿ ಹಾಡುಗಾರರು, ಹಾಡಿಕೆ ವೃತ್ತಿ ಮತ್ತು ಧ್ವನಿ ಮುದ್ರಣ ಮಾರುಕಟ್ಟೆ, ಪ್ರಸಿದ್ಧಿ ಮತ್ತು ಧ್ವನಿಮುದ್ರಣ ಪ್ರಪಂಚ, ಸ್ಥಿರಾಸ್ತಿ, ಚರಾಸ್ತಿ, ಹರದೇಶಿ–ನಾಗೇಶಿ ಮಹಿಳಾ ಹಾಡುಗಾರರ ಬಡತನೀಕರಣ ಅಂಶಗಳನ್ನು ಉದಾಹರಣೆಗಳ ಸಹಿತ ಸಾದ್ಯಂತ ವಿವರಿಸುತ್ತಾರೆ. ಇದಲ್ಲದೆ, ಕೆಲವು ಜೀವಂತ ಪ್ರದರ್ಶನಗಳನ್ನು ವೀಕ್ಷಿಸಿ, ಸೂಕ್ಷ್ಮ ಮನೋಭೂಮಿಕೆಯಲ್ಲಿ ಅಲ್ಲಿಯ ವಾತಾವರಣವನ್ನು ಕಟ್ಟಿಕೊಡುತ್ತಾರೆ.

### ಪದಕೋಶ

**ರಂಗತಾಲೀಮು** : ಹಾಡಿಕೆಯ ತಾಲೀಮು ಮಾಡುವುದಕ್ಕೆ 'ರಂಗ ತಾಲೀಮು' ಎನ್ನುವರು.

**ಶಾಹಿರ್ ಮತ್ತು ಶಾವರ್ಕೆರು** : ಶಾಯರ್ ಅಥವಾ ಶಾಹಿರ್ ಎಂದರೆ ಕವಿ. ಆರಂಭದಲ್ಲಿ ದಪ್ಪಿನ ಪದಗಳನ್ನು ಬರೆಯುವವರಿಗೆ ಹಾಗೂ ಪುರುಷರಿಗೆ 'ಶಾವರ್ಕೆರು' ಎನ್ನುತ್ತಿದ್ದರು. ಇಂಥವರು ಮಾತ್ರ ತಮ್ಮ ಹೆಸರಿನ ಮುಂದೆ 'ಶಾಹಿರ್' ಎಂದು ಸೇರಿಸಿಕೊಳ್ಳುತ್ತಿದ್ದರು. ಮಹಿಳಾ ಹಾಡುಗಾರರು ದಪ್ಪಿನ ಪದಗಳನ್ನು ಹಾಡುತ್ತಾರೆಯೇ ಹೊರತು ರಚಿಸುವುದಿಲ್ಲ. ಪುರುಷ ಹಾಡುಗಾರರಿದ್ದಾಗ ಮಾತ್ರ ಚಾಲ್ತಿಯಲ್ಲಿದ್ದ 'ಸೃಜನಶೀಲ ಕವಿ' ಎನ್ನುವ ಅರ್ಥ ನಿರ್ವಚನಗಳು ಮಹಿಳಾ ಹಾಡುಗಾರರ ಪ್ರವೇಶದಿಂದಾಗಿ ಹಿಂದೆ ಸರಿದಿವೆ. ಅಗಾಧ ಪ್ರಮಾಣದ ಹಾಡುಗಳನ್ನು ನೆನಪಿಡುವುದನ್ನೇ 'ಜ್ಞಾನ' ಎಂದು ಗೌರವದಿಂದ ಕರೆಯಲಾಗುತ್ತಿದೆ. ಈ ಅರ್ಥದಲ್ಲಿಯೇ 'ಶಾವರ್ಕೆರು,' 'ಶಾಹಿರ್' ಎನ್ನುವ ಪದ ಬಳಕೆಗೊಳ್ಳುತ್ತಿದೆ.

**ಸಖಿ–ಖ್ಯಾಲಿ:** ಹರದೇಶಿ–ನಾಗೇಶಿ ಹಾಡುಗಳನ್ನು ಸಖಿ–ಖ್ಯಾಲಿ ಎಂದು ಕರೆಯುವ ವಾಡಿಕೆ ವಿಜಾಪುರದ ಭಾಗದಲ್ಲಿದೆ. ಕಂಬಾಗಿಯ ಹನುಮವ್ವನು 'ಸಖಿ–ಖ್ಯಾಲಿ ಹಾಡ್ತೀನಿ' ಎಂದು ಹೇಳಿದಳು. ಅಂದರೆ ಸಖಿ–ಖ್ಯಾಲಿಯು ಕೂಡ ಹಾಡಿಕೆ ಎನ್ನುವ ಅರ್ಥದಲ್ಲಿಯೇ ಬಳಕೆಗೊಳ್ಳುತ್ತಿದೆ. ಹರದೇಶಿ–ನಾಗೇಶಿ ಹಾಡುಗಳ ರಚನಾ ಸ್ವರೂಪದ ಚೌಕಟ್ಟೆ ಈ ಪದ ಬಳಕೆಗೆ ಕಾರಣವಾಗಿರಬೇಕು. ಹಾಡಿಕೆಯವರು ಹಾಡುವ ಹಾಡು ಮೂರು ಹಂತದಲ್ಲಿ ವಿಂಗಡನೆಗೊಂಡಿರುತ್ತದೆ: ಅವುಗಳೆಂದರೆ 1. ಸಖಿ, 2. ಪದ, 3. ಖ್ಯಾಲಿ. ಹರದೇಶಿ–ನಾಗೇಶಿ ಹಾಡುಗಾರರು ಮೊದಲಿಗೆ ತಮ್ಮ ಪಕ್ಷದ ತಾತ್ತ್ವಿಕತೆಗೆ ಅನುಗುಣವಾಗಿ ದೇವರ ಸ್ತುತಿಗೀತೆಯನ್ನು ಹಾಡುವರು. ಇದಕ್ಕೆ 'ಸಖಿ' ಎನ್ನುವರು. ತಾವು ಬೆಳಸಲಿರುವ ತಾತ್ತ್ವಿಕತೆಗೆ ಸಂಬಂಧಿಸಿದಂತೆ ಮುಖ್ಯ ಕಥನವನ್ನು ಹೇಳುವರು. ಕಥನವು ಕಡಿಮೆಯೆಂದರೆ 18 ನುಡಿಗಳಿಗೆ ವಿಸ್ತರಿಸಿಕೊಂಡಿರುತ್ತದೆ. ನುಡಿಗಳನ್ನು ಲೆಕ್ಕ ಹಾಕಲಾಗುವುದಿಲ್ಲವಂತೆ; ಅದು ಒಂದುಗಂಟೆಯಿಂದ ಎರಡುಗಂಟೆಯ ಅವಧಿಯವರೆಗೂ ವಿಸ್ತರಿಸಿಕೊಳ್ಳುತ್ತದೆಯಂತೆ. ವಿಜಾಪುರ ಭಾಗದಲ್ಲಿ ಮುಖ್ಯಕಥನವನ್ನು 'ಪದ' ಎಂದು ಕರೆದರೆ; ಗುಲಬರ್ಗಾ ಭಾಗದಲ್ಲಿ 'ಪಟ್ಟೇವು' ಎಂದು ಕರೆಯುತ್ತಾರೆ. 'ಪಟ್ಟೇವು' ಎನ್ನುವುದು 'ಪತ್ಯ' ಎನ್ನುವ ಅರ್ಥದಲ್ಲಿ ಬಳಕೆಗೊಳ್ಳುತ್ತಿರಬೇಕು. ಹಾಡಿನ ಮುಕ್ತಾಯವನ್ನು 'ಖ್ಯಾಲಿ' ಎಂದು ಕರೆಯುತ್ತಾರೆ. ಇದಕ್ಕೆ ಕೆಲವರು 'ಚಾಲಿ' ಎಂದು ಕೂಡ ಹೇಳುವರು. ಹಾಡಿಕೆ ಸಾಹಿತ್ಯ ರಚನೆಯಲ್ಲಿನ ಆರಂಭದ 'ಸಖಿ'ಯನ್ನು ಕೊನೆಯ 'ಖ್ಯಾಲಿ' ಯನ್ನು ಸೇರಿಸಿ, ಸಖಿ–ಖ್ಯಾಲಿ ಎಂದು ಹಾಡುಗಾರರು ಮಾತ್ರ ಬಳಸುತ್ತಾರೆ.


ಬಾನುಬಾಯಿ ಮತ್ತು ಮಕದುಮ್ ಸಾಬ್

**3 ಸಾಂಸ್ಕೃತಿಕ ವೈಭವೀಕರಣದ ಮಿಥ್ ಒಡೆಯುವಿಕೆ**

*ಮಹಿಳೆಯರ ಜೀವನ ಕ್ರಮ ರೂಪಿಸುವಲ್ಲಿ ಸಾಂಸ್ಕೃತಿಕ ವಿಚಾರಗಳು ಬಹಳಷ್ಟು ಮುನ್ನೆಲೆಗೆ ಬರುತ್ತವೆ. ರಾಜಕೀಯ ಶಕ್ತಿಗಳು ಕೂಡಾ ಆಗಾಗ್ಗೆ ಈ ಸಾಂಸ್ಕೃತಿಕ ವಿಚಾರಗಳನ್ನು ಬಳಸಿಕೊಂಡು ಮಹಿಳೆಯರ ಹಕ್ಕುಗಳಿಗೆ ಚ್ಯುತಿ ತರುತ್ತಿರುವುದನ್ನು ಗಮನಿಸಬಹುದು. ಮಾತೃತ್ವ, ಉಡುಪು, ಆಧುನಿಕ ಹೆಣ್ಣಿನ ವರ್ತನೆ ಇಂತಹ ವಿಚಾರಗಳಲ್ಲಿ ಸಂಸ್ಕೃತಿಯನ್ನು ಸಾರಾಸಗಟಾಗಿ ಬಳಸಿಕೊಳ್ಳುವ ಪ್ರವೃತ್ತಿ ಹೆಚ್ಚಾಗುತ್ತಿರುವುದನ್ನೂ ಕಾಣುತ್ತಿದ್ದೇವೆ. ಇಂತಹ ಸಂದರ್ಭದಲ್ಲಿಯೇ ದೇಸೀಯ ಕಲ್ಪನೆಯ ಹಿನ್ನಲೆಯಲ್ಲಿ ಸಾಂಸ್ಕೃತಿಕ ಅಧ್ಯಯನಗಳ ಮೇಲೆ ಒತ್ತು ಕೂಡಾ ಬೀಳುತ್ತಿದೆ. ಜಾಗತೀಕರಣದ ಪ್ರವಾಹದ ಎದುರಾಗಿ ಸಾಗುವ ಸಲುವಾಗಿ ಸಂಸ್ಕೃತಿಯನ್ನು ಒಂದು ಅಸ್ತ್ರದ ರೀತಿಯಾಗಿಯೇ ಬಳಸುವುದು ಉದ್ದೇಶವಾದಾಗ ಹರದೇಶಿ – ನಾಗೇಶಿ ಕಲಾವಿದೆಯರ ಬದುಕಿನ ವಿವರಗಳು ಕೂಡಾ ವೈಭವೀಕರಣದ ತೆಕ್ಕೆಗೆ ಬೀಳುವ ಸಾಧ್ಯತೆ ಇತ್ತು. ಆದರೆ ಕಲಾವಿದೆಯರ ವಾಸ್ತವ ಬದುಕಿನ ಚಿತ್ರಣಕ್ಕೆ ಕನ್ನಡಿ ಹಿಡಿಯುತ್ತಲೇ, ಅವರ ಶೋಷಿತ ಬದುಕಿನ ಆಯಾಮಗಳನ್ನು ವಿಶ್ಲೇಷಿಸುವ, ಅವರು ಬದುಕಿ ಉಳಿಯಲು ನಡೆಸುವ ಹೋರಾಟವನ್ನು ಬಿಚ್ಚಿಡುತ್ತಾರೆ ಡಾ. ಶೈಲಜ. ಕಲಾವಿದೆಯರ ಸಂತೋಷ, ಅಳಲು, ಹೆಮ್ಮೆ, ಅವಮಾನ, ಹೋರಾಟ, ಶ್ರಮ, ಬಡತನ ಎಲ್ಲವೂ ಸಹ ಇಂತಹ ಸಾಂಸ್ಕೃತಿಕ ಕಥನಗಳ ಭಾಗಗಳಾಗಿವೆ.*

–ಚಂಪಾ

ನಿರಂತರ ಸಮಸ್ಯೆಗಳ ಸುಳಿಯಲ್ಲಿ ಸಿಲುಕುವಂತಾಗಿರುವ ಹಾಡಿಕೆಯವರ ಬದುಕು, ಹಾಡು ಮುಗಿಯದ ಮುಕ್ತಾಯದಂತಾಗಿದೆ. ವಯಸ್ಸಿದ್ದಾಗ ಹಾಡಿಕೆಯ ವೃತ್ತಿಯನ್ನು ಕಾಪಾಡಲು, ಕೌಟುಂಬಿಕ ಜವಾಬ್ದಾರಿಗಳನ್ನು ನಿಭಾಯಿಸಲು ಒಂದು ರೀತಿಯ ಸೆಣಸಾಟವಾದರೆ, ಮಾಗುತ್ತಾ ಬಂದಂತೆ ಬೇರೆ ತೆರನಾದ ಸಮಸ್ಯೆಗಳು ಕಾಡತೊಡಗುತ್ತವೆ. ಹಾಗಾದರೆ ಪರ್ಯಾಯಗಳಿಲ್ಲವೇ? **ಹಾಡಿಕೆ ಮಹಿಳೆ: ರಾಜಕೀಯ: ಪರ್ಯಾಯ, ಸಂಘಟನೆ, ಹಾಡಿಕೆಯವರು ಹಾಗೂ ಪ್ರೇಕ್ಷಕರ ನಡುವಿನ ಸಂಬಂಧಗಳು, ಹಾಡಿಕೆ; ಜ್ಞಾನ, ಗ್ರಾಮೀಣ ಕಲಾ ಮಾರುಕಟ್ಟೆ; ಜಾತಿ ಹಾಗೂ ಲಿಂಗ ರಾಜಕಾರಣ, ನಾಗಕನ್ಯೆಯರು; ಹಾಡಿಕೆ, ಹಾಡಿನ ವಿಸ್ತರಣೆ,** ಹೀಗೆ ಪ್ರತಿಯೊಂದು ಆಯಾಮವನ್ನು ವಿವರಿಸುತ್ತಾರೆ. ತಂದೆಯ ಹೆಸರಿನ ನಮೂದು; ಸಮಸ್ಯೆಗಳು ಎಂತಹವರನ್ನೂ ಕಾಡುತ್ತದೆ.

ದೇವದಾಸಿಯರಿಗೆ, ದೇವದಾಸಿಯರ ಮಕ್ಕಳಿಗೆ ಸರಕಾರಿ ಸೌಲಭ್ಯಗಳು ಲಭ್ಯವಾಗಬೇಕಾದರೆ, ಸರಕಾರ ರೂಪಿಸಿದ ನೀತಿ, ನಿಯಮಗಳ ಹಾಗೆ ಅವರ ಹೆಸರು ದಾಖಲುಗೊಂಡಿರಬೇಕು. ಗಂಡ ಇಲ್ಲದವಳು, ಸೂಳೆ ಎಂದು ಹಾಡಿಕೆಯಲ್ಲಿ, ಸಮಾಜದಲ್ಲಿ ಎದುರಾಗುವ ಅಪಮಾನಗಳು, ಹರದೇಶಿ–ನಾಗೇಶಿ ಮಹಿಳಾ ಹಾಡುಗಾರರಿಗೆ ಸರಕಾರಿ ನಿಯಮಗಳಿಗೆ ಅನುಗುಣವಾಗಿ ಮಕ್ಕಳ ಹೆಸರನ್ನು ಶಾಲೆಯಲ್ಲಿ ದಾಖಲಿಸದಂತೆ ಮಾಡಿದೆ.

"ಗಂಡ ಇಲ್ಲಾರೆ, ನೀ ಸೂಳಿ, ದೇವದಾಸಿ ಅಂತಾ ಹಾಡ್ಯಾಕಿ ಅನಿಸ್ಕೊಂಡ ಅನಿಸ್ಕೊಂಡ ಸಾಕಾಗ್ಯೈತ್ರಿ. ಸಾಲಿಗಿ ಮಕ್ಕಳ್ನ ಸೇರ್ಸಾಕ ಹೋದ್ರೂ ಅದs ತೆಲಿಬ್ಯಾನಿ. ಅಪ್ಪನ ಹೆಸ್ರೇನು ಅಂತ ಕೇಳ್ತಾರು. ಮಕ್ಕಳಿಗಿ ಅಪ್ಪ ಬೇಕೆ ಬೇಕೇನು? ಅದಕ್ಕ ಸಿಟ್ಟಿಗೆದ್ದ, ನಮ್ಮ ಮಾವನ ಹೆಸರ್ನ ಬರ್ಸಿದ್ಯಾ" ಎಂದು ಲಕ್ಷ್ಮೀಬಾಯಿ ಹೇಳುವುದು ನಮ್ಮ ಸಮಾಜ, ಸರಕಾರದ ಮಂದದೃಷ್ಟಿಗೆ ಕನ್ನಡಿ ಹಿಡಿದಂತಾಗಿರುವುದು ವಾಸ್ತವ. ಇಂತಹ ಕಾನೂನು, ಕಟ್ಟಳೆಗಳು ಹಾಡಿಕೆಯಂಥವರ ಬದುಕನ್ನೇ ಮೂರಾಬಟ್ಟೆ ಮಾಡುತ್ತಿವೆ. ಅತ್ತ ಕಲಾವಿದೆ ಅಂತಲೂ ಗುರುತಿಸದೆ, ಇತ್ತ ತಾಯಿ ಎಂತಲೂ ಗುರುತಿಸದ ಈ ಸಮಾಜದ ಬಗ್ಗೆ ಹಾಡಕಿ ಹೆಣ್ಣುಮಕ್ಕಳಲ್ಲಿ ಯಾವ ಭಾವನೆ ಇರಬಹುದು!

ಬದುಕು ನಿಂತ ನೀರಲ್ಲ, ಚಲನಶೀಲವಾಗಿ ಪ್ರವಹಿಸುವ ನದಿ. ಹಾಡಿಕೆಯವರ ಮಕ್ಕಳು ಇಂದು ವಿದ್ಯೆ ಕಲಿತಿದ್ದಾರೆ. ಅವರ ದೃಷ್ಟಿಯಲ್ಲಿ ಹಾಡಿಕೆ ತಾಯಂದಿರ ಹಾಡಿಕೆಯ ಬಗ್ಗೆ ಏನು ನಿಲುವಿದೆ ಎಂಬುದನ್ನು ವಿವರಿಸುತ್ತಾರೆ. ಕೊನೆಯಲ್ಲಿ 'ಹಾಡಿಕೆ: ಸಮಾಜ: ಸರಕಾರ' ಎಂಬ ಶೀರ್ಷಿಕೆಯಡಿಯಲ್ಲಿ ಶೈಲಜ ಅವರು ಹೀಗೆ ಹೇಳುತ್ತಾರೆ.

"ಸರಕಾರವು 'ದೇವದಾಸಿ' ನಿಷೇಧ ಕಾಯ್ದೆಯನ್ನು ಕಡ್ಡಾಯಗೊಳಿಸುತ್ತದೆ. ಅದೇ ಕಾಲದಲ್ಲಿ ಪರಂಪರೆಯ ಉದ್ದಕ್ಕೂ 'ದೇವದಾಸಿ'ಯರೇ ನಿರ್ವಹಿಸಿಕೊಂಡು ಬಂದ ಕಲೆಗಳನ್ನು ಕಲಾತ್ಮಕ ನೆಲೆಯಲ್ಲಿ ಅರ್ಥೈಸುತ್ತದೆ. ಹೀಗೆ ಅರ್ಥೈಸುತ್ತಲೇ ಅವರ ಕಲೆಗಳನ್ನು ಸಂಸ್ಕೃತಿಯ ಹಾಗೂ ಪರಂಪರೆಯ ಭಾಗವಾಗಿಸಿಕೊಳ್ಳುತ್ತದೆ. ತಳ ಸಮುದಾಯಗಳಲ್ಲಿನ ಕಲೆಗಳು ಅಳಿವಿನಂಚಿನಲ್ಲಿವೆ ಎಂದು ಹಳಹಳಿಸುತ್ತ, ಅವುಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಸರಕಾರದ ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಹಾಗೂ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಗಳು ನಿರ್ವಹಿಸುತ್ತಿದ್ದರೆ, ಸಮಾಜದ ನೆಲೆಯಲ್ಲಿ ಜಾತ್ರೆ, ಉತ್ಸವಗಳು ನಿರ್ವಹಿಸುತ್ತಿವೆ. ಹೀಗೆ ಸರಕಾರ ಹಾಗೂ ಸಮಾಜಗಳು ಒದಗಿಸುವ ಕಲಾವೇದಿಕೆಗಳೇ 'ದೇವದಾಸಿ' ಪರಂಪರೆಯನ್ನು ಪೋಷಿಸುತ್ತಿವೆ. ಹಾಗೂ ಮುಂದುವರೆಸುತ್ತಿವೆ."

### ಪದಕೋಶ

**ಸೀಜನ್ :** ಫೆಬ್ರವರಿಯಿಂದ ಮೇವರೆಗೆ ಉತ್ತರ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕ ಭಾಗಗಳಲ್ಲಿ ಜಾತ್ರೆಗಳು ನಡೆಯುತ್ತವೆ. ಹರದೇಶಿ–ನಾಗೇಶಿ ಹಾಡುಗಾರರಿಗೆ ಈ ಅವಧಿಯಲ್ಲಿ ಹೆಚ್ಚು ಆಹ್ವಾನಗಳು ಬರುತ್ತವೆ. ಹಾಡುಗಾರರ ಪಾಲಿಗೆ ಈ ಅವಧಿ 'ಚಾಜ' ಪಡೆದುಕೊಳ್ಳುವ 'ಸುಗ್ಗಿಯಕಾಲ'. ಹೀಗಾಗಿಯೇ ಹರದೇಶಿ–ನಾಗೇಶಿ ಹಾಡುಗಾರರು ಈ ಅವಧಿಯನ್ನು 'ಸೀಜನ್' ಎಂದು ಕರೆಯುತ್ತಾರೆ. ಕೆಲವರು 'ಹಾಡಕಿ ಸೀಜನ್' ಎಂದೂ ಹೇಳುತ್ತಾರೆ.

**ಸೂರು ಹಾಕುವುದು ಮತ್ತು ಸೂರುಕಾರರು :** ದಪ್ಪಿನ ಪದಕ್ಕೆ ಹಿಮ್ಮೇಳವಾಗಿ ತುಂತುಣಿ ನುಡಿಸುವವರು, ಬಾಳ ಬಾರಿಸುವವರು ಇರುತ್ತಾರೆ. ತುಂತುಣಿ ನುಡಿಸುವುದನ್ನು 'ಸೂರು ಹಾಕುವುದು' ಎಂದು ಹೇಳಲಾಗುತ್ತದೆ. ತುಂತುಣಿ ನುಡಿಸುವವರನ್ನು 'ಸೂರುಕಾರರು,' 'ಸೂರು ಹಾಕೋರು' ಎಂದು ಕರೆಯುತ್ತಾರೆ.

**ಹರದೇಶಿ–ನಾಗೇಶಿ:** ಶಿವನ ಪಾರಮ್ಯದ ಮೂಲಕವೇ ಗಂಡಿನ ಹೆಚ್ಚುಗಾರಿಕೆಯನ್ನು ಸಾರುವ ಹಾಗೂ ನಿರೂಪಿಸುವ ಹಾಡುಗಳನ್ನು 'ಹರದೇಶಿ' ಹಾಡುಗಳು ಎಂದು ಕರೆಯುತ್ತಾರೆ. ಶಕ್ತಿ ಪಾರಮ್ಯದ ಮೂಲಕ ಸ್ತ್ರೀಯ ಹೆಚ್ಚುಗಾರಿಕೆಯನ್ನು ಸಾರುವ ಹಾಗೂ ನಿರೂಪಿಸುವ ಹಾಡುಗಳನ್ನು ನಾಗೇಶಿ ಹಾಡುಗಳು ಎಂದು ಕರೆಯುವರು. ಈ ಹಾಡುಗಳನ್ನು ನಾಥ ಪಂಥದ ಮೂಲದಿಂದ ಕೆಲ ವಿದ್ವಾಂಸರು ಗುರುತಿಸುತ್ತಾರೆ.

**ಹಾಡಿಕೆ :** ಹರದೇಶಿ–ನಾಗೇಶಿ ಹಾಡುಗಳನ್ನು ಹಾಡುವುದಕ್ಕೆ 'ಹಾಡಿಕೆ,' 'ಹಾಡ್ಕಿ' 'ಹಾಡಕಿ' ಎನ್ನುತ್ತಾರೆ. ಇದಕ್ಕೆ ದಪ್ಪಿನ ಪದಗಳು, ದಪ್ಪಿನ ಹಾಡುಗಳು, ಶಾವರಕಿ ಹಾಡುಗಳು, ಗೀಗೀ ಪದಗಳು, ಗೀಗೀ ಹಾಡುಗಳು, ಲಾವಣಿಗಳು ಎಂದು ಕೂಡ ಹೇಳುತ್ತಾರೆ.

**ಹಾಡಿಕೆಯವರು :** ಹರದೇಶಿ–ನಾಗೇಶಿ ಹಾಡುಗಳನ್ನು ಹಾಡುವವರಿಗೆ 'ಹಾಡಿಕೆಯವರು', 'ಹಾಡ್ಕಿಯವರು' ಎನ್ನುತ್ತಾರೆ. ಹಾಡಿಕೆಯವರಿಗೆ ಶಾವರ್ಕೆರು, ದಪ್ಪಿನವರು, ಗೀಗೀಯವರು ಎಂದು ಕೂಡ ಹೇಳುವರು.

**4. ಸಾಮಾಜಿಕ ಹಾಗೂ ಲೈಂಗಿಕ ಹಿಂಸೆಗಳು**

*ಹರದೇಶಿ- ನಾಗೇಶಿ ಕಲಾವಿದೆಯರಿಗೆ ಅವರ ಕಲಾ ಸೇವೆಯಿಂದಾಗಿ ಒಂದು ರೀತಿಯ ಸ್ವಾತಂತ್ರ್ಯ ಹಾಗೂ ಗೌರವ ಸಿಗಬೇಕಿತ್ತು. ಆದರೆ ಇವರು ಸಾಮಾಜಿಕವಾಗಿ, ಭಾವನಾತ್ಮಕವಾಗಿ, ಆರ್ಥಿಕವಾಗಿ, ಲೈಂಗಿಕವಾಗಿ ದೌರ್ಜನ್ಯಕ್ಕೆ ಒಳಗಾಗುತ್ತಲೇ ಇದ್ದಾರೆ. ಊಳಿಗಮಾನ್ಯ ವ್ಯವಸ್ಥೆಯ ಒಳಸಂಚುಗಳ ಸುಳಿಯಲ್ಲಿ ಎಲ್ಲಾ ರೀತಿಯ ಹಿಂಸೆಗಳಿಗೂ ಇವರು ವಸ್ತುವಾಗುತ್ತಿರುತ್ತಾರೆ. ಹಾಗಾಗಿಯೇ ಕಲಿತಮಕ್ಕಳು ತಮ್ಮ ತಾಯಂದಿರು ಹಾಡಿಕೆ ಮಾಡಿಯೇ ಇಲ್ಲವೆನ್ನುತ್ತಾರೆ. ತಾಯಿ ತನ್ನ ಅನುಭವ ಹಂಚಿಕೊಳ್ಳಲು ಕಲಿತಮಕ್ಕಳು ಬಿಡದೇ ಇರುವ ಪ್ರಸಂಗಗಳನ್ನೂ ಲೇಖಕಿ ದಾಖಲಿಸುತ್ತಾರೆ. ಇದು ಕಲಾವಿದೆಯರಿಗಿರುವ ಸ್ಥಾನಮಾನಗಳನ್ನು ಸೂಚಿಸುತ್ತದೆ. ಭೋಗಕ್ಕೆ ಆಕೆ ಅರ್ಹಳೆಂದೇ ಸಾಮಾನ್ಯವಾಗಿ ಭಾವಿಸುತ್ತಾರೆ. ಹಾಗಾಗಿ ಶೌಚಾಲಯಕ್ಕೆ ಹೋಗುವುದರಿಂದ ಹಿಡಿದು ತಮ್ಮ ಎಲ್ಲಾ ಕ್ರಿಯೆಗಳಲ್ಲೂ ಕಲಾವಿದೆಯರು ಬಹಳ ಜಾಗರೂಕತೆ ವಹಿಸಬೇಕಾಗುತ್ತದೆ. ಬುದ್ಧಿವಂತರ ಲೈಂಗಿಕ ಕರೆ ನಿರಾಕರಿಸಿದರೆ ಹಾಡುಗಾರ್ತಿಯರು ಹಾಡಿಕೆಯ ಸಂದರ್ಭದಲ್ಲಿ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಹಾಗಾಗಿ ಪ್ರಶ್ನೆ ಕೇಳದಿರುವಂತೆ ಕಲಾವಿದೆಯರು ವಿನಂತಿಸಿಕೊಳ್ಳುವುದೂಉಂಟು. ಬದುಕಿನ ಅನಿವಾರ್ಯದಿಂದಾಗಿ ಹೆರಿಗೆಯಾದಾಗಲೂ ಮಹಿಳೆಯರು ಹದಿನೈದು ದಿನಕ್ಕೇ ಹಾಡಿಕೆಗೆ ಹೋಗುವುದುಂಟು. ಲೈಂಗಿಕ ದೌರ್ಜನ್ಯಗಳನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರವೇ ಕಲಾವಿದೆಯರು ತಮ್ಮ ಜೊತೆಗಿನ ಪುರುಷ ಕಲಾವಿದರೊಂದಿಗೇ ಸಂಬಂಧ ಹೆಣೆದುಕೊಂಡಿರುತ್ತಾರೆ. ಹಾಡಿಕೆ ಕಲಿಯುವಾಗಲೂ ಗುರುಗಳ ಆಸೆ–ಆಮಿಷಗಳಿಗೆ ಕಲಾವಿದೆಯರು ಒಳಗಾಗಬೇಕಾದಂತಹ ಅನಿವಾರ್ಯತೆಯ ಪ್ರಕರಣಗಳನ್ನು ಲೇಖಕಿ ದಾಖಲಿಸಿದ್ದಾರೆ. ಧ್ವನಿಯನ್ನು ಕಾಪಾಡಿಕೊಳ್ಳಬೇಕಾದ ಕಲಾವಿದೆಯರು ತಾವು ಸೇವಿಸುವ ಆಹಾರದ ಮೇಲೂ ತಾವೇ ನಿಯಂತ್ರಣ ಹಾಕಿಕೊಂಡಿರುತ್ತಾರೆ.*

*–ಚಂಪಾ*



# ಬದಲಾವಣೆಗೆ ತೆರೆದುಕೊಳ್ಳುತ್ತಿರುವ ಬುಡಕಟ್ಟು – ಹಾಲಕ್ಕಿ ಒಕ್ಕಲಿಗರು

■ ಡಾ. ಎಚ್. ಎಸ್. ಅನುಪಮಾ

ಕರ್ನಾಟಕದ ಕರಾವಳಿ ಜಿಲ್ಲೆಯಾದ ಉತ್ತರ ಕನ್ನಡ ಅನೇಕ ಬುಡಕಟ್ಟುಗಳನ್ನು ಹೊಂದಿದೆ. ಹಾಲಕ್ಕಿ ಒಕ್ಕಲಿಗ, ಕರೆಒಕ್ಕಲರು. ಗಾಮೊಕ್ಕಲು, ಸಿದ್ದಿ, ಮರಾಟಿ, ಮರಾಟ ಕುಣಬಿ, ಗೌಳಿ, ಹಸ್ಲರು, ಗೊಂಡ – ಹೀಗೇ ಉತ್ತರ ಕನ್ನಡ ಜಿಲ್ಲೆಯ ಗುಡ್ಡ–ಬೆಟ್ಟ–ಗದ್ದೆ–ತೀರಗಳಲ್ಲಿ ಹರಡಿಕೊಂಡ ಹಲವು ಬುಡಕಟ್ಟು ಸಮುದಾಯಗಳಿವೆ. ಇಂಥವುಗಳಲ್ಲಿ ಕರಾವಳಿ ತಾಲೂಕು ಹಾಗೂ ಘಟ್ಟದ ಮೇಲೆ ಕೆಲಕಡೆ ಹರಡಿಕೊಂಡಿರುವ ಹಾಲಕ್ಕಿ ಒಕ್ಕಲಿಗ ಸಮುದಾಯ ತಮ್ಮ ವಿಶಿಷ್ಟ ವೇಷ ಭೂಷಣಗಳಿಂದ ಥಟ್ಟನೆ ಗಮನ ಸೆಳೆಯುತ್ತದೆ. ಕೆಲ ಬುಡಕಟ್ಟುಗಳು ಊರಿನಿಂದ, ಇತರ ಜನಸಮುದಾಯಗಳಿಂದ ದೂರವಾಗಿ ಕಾಡುಗಳಲ್ಲಿ ಜೀವಿಸಿದರೆ ಹಾಲಕ್ಕಿ ಸಮುದಾಯವು ತಮ್ಮ ಕೊಪ್ಪ, ಹಾಡಿಗಳಲ್ಲಿ ಗುಂಪುಗುಂಪಾಗಿ ಬತ್ತದ ಗದ್ದೆ, ತೋಟ, ಗೇರು, ಹಾಡಿ, ಉಪ್ಪಿನ ಗದ್ದೆಗಳ ಒಡೆಯರಾಗಿ ಉಳಿದ ಜನಸಮುದಾಯಗಳ ಜೊತೆಜೊತೆಗೇ ಬದುಕುತ್ತಿದ್ದಾರೆ. ಹುಟ್ಟಾ ಕೃಷಿಕರಾದ ಹಾಲಕ್ಕಿಗಳಲ್ಲಿ ಭೂರಹಿತರು, ತೀರಾ ಬಡವರು ಕಡಿಮೆ. ಕಷ್ಟಪಟ್ಟು ದುಡಿಯುವ, ಗಳಿಸಿದ್ದನ್ನು ಉಳಿಸುವ ಈ ಜನ ಕಠಿಣ ಕೆಲಸಗಳಿಗೆ ಜಗ್ಗದ ಶ್ರಮದ ದುಡಿಮೆಗಾರರು. ಸಣ್ಣಪುಟ್ಟ ವ್ಯಾಪಾರಕ್ಕೆ ಹೆಂಗಸರು ಎತ್ತಿದ ಕೈ. ತಾವು ಬೆಳೆದ ತರಕಾರಿ, ಹೂ, ಹಣ್ಣು, ಬುಟ್ಟಿ, ಮೀನುಮಾರುವ ಹೆಂಗೆಳೆಯರು ಆಚೀಚೆ ಹಾಲಕ್ಕಿ ಕೇರಿಯಿರುವ ರಸ್ತೆಯುದ್ದಕ್ಕೂ ಕಾಣಸಿಗುತ್ತಾರೆ. ಕೆಲವರು ಪಾರಂಪರಿಕ ಕಸುಬಾಗಿ ನಾಟಿವೈದ್ಯ, ನೋಟ, ಮಾಟ, ಜಲಕಣ್ಣು ನೋಡುವುದು, ದೆವ್ವ ಬಿಡಿಸುವುದು ಇಂಥವನ್ನೂ ನೆಚ್ಚಿಕೊಂಡಿದ್ದಾರೆ.

'ಕವುಂಡ' ಎಂಬ ಪದದಿಂದ 'ಗೌಡ' ಬಂದಿರಬಹುದೆಂಬುದು ಒಂದು ಅಂದಾಜು. ಕವುಂಡ ಎಂದರೆ ದನಸಾಕುವವ ಎಂದರ್ಥ. ಒಕ್ಕಲುತನವನ್ನೇ ನಂಬಿದ ಜನ ಇವರಾದ್ದರಿಂದ ಒಕ್ಕಲಿಗ ಎಂಬುದು ಅನ್ವರ್ಥ ನಾಮ. ಪ್ರತಿ ಕೇರಿಗೊಬ್ಬ 'ಹಿರಿಯ' ಅಥವಾ ಗೌಡ ಇರುತ್ತಾನೆ. ಹಾಲಕ್ಕಿಗಳ ಜಾನಪದ ರಿವಾಜಾದ ಸುಗ್ಗಿ ಹಬ್ಬದ ಕುಣಿತಕ್ಕೆ ವೀಳ್ಯ ಕಟ್ಟುವುದು ಆತನ ಮನೆಯಿಂದಲೇ. ನಂತರವೂ ಬೇರೆಬೇರೆ ಊರಿನ ಸುಗ್ಗಿ

ತಂಡಗಳು ಬಂದು ಬೀಡುಬಿಡುವುದು ಗೌಡನ ಮನೆಯಲ್ಲಿಯೇ. ಗೌಡನಿಗೆ ಜಾತಿ ಪಂಚಾಯ್ತಿ ಸಮಯದಲ್ಲಿ, ಉಳಿದಂತೆ ಕೇರಿಯಲ್ಲಿ ಬಹಳ ಗೌರವ. ಅದು ತಲೆತಲಾಂತರದಿಂದ ಬರುವ ಪಟ್ಟ. ಗೌಡನ ಹೆಂಡತಿ ಗೌಡ್ತಿ. ಮೂಗು, ಕಿವಿ, ಕುತ್ತಿಗೆ, ಕೈಕಾಲುಗಳಿಗೆ ಕಂಚಿನ ಆಭರಣ ತೊಟ್ಟ, ಮಣಿಸರಮಾಲೆಯನ್ನು ಕುತ್ತಿಗೆ ಮುಚ್ಚುವಷ್ಟು ಧರಿಸಿದ ಗೌಡ್ತಿಯರು ಬೈತಲೆ ತೆಗೆದು ತುರುಬುಕಟ್ಟಿ ಮುಡಿತುಂಬ ಯಾವುದಾದರೂ ಹೂವು ಸೂಡಿಕೊಂಡಿರುವುದು ತುಂಬ ಸಾಮಾನ್ಯ. ಈಗ ವಸ್ತ್ರಾಭರಣ ಬದಲಾಗಿದೆ. ಈಗಿನ ತಲೆಮಾರಿನವರಾರೂ ಆ ದಿರಿಸು ಧರಿಸುತ್ತಿಲ್ಲ. ಅಂಥ ಉಡುಪು ಇನ್ನು ಹಾಕಬಾರದೆಂದು ಹಿರಿಯನೇ ಬಂದು ಮನೆಮನೆಯಲ್ಲಿ ಹೇಳಿಹೋಗಿದ್ದಾನಂತೆ. ಎದ್ದು ಕಾಣುವ ಸಂಗತಿಯೆಂದರೆ ಹಾಲಕ್ಕಿಗಳು ಬಂಗಾರದ ಆಭರಣ ಧರಿಸುವುದು ತುಂಬ ಕಡಿಮೆ. ದುಡ್ಡಿರುವವರೂ ಕೂಡಾ ಬಂಗಾರದ ನೆಕ್ಲೇಸ್. ಸರ, ಬಳೆ ಧರಿಸುವುದು ತೀರಾ ಅಪರೂಪ. ಮಣಿಸರ, ಹಿತ್ತಾಳೆ-ಬೆಳ್ಳಿ-ಗಾಜಿನ ಬಳೆಗಳೇ ಅವರಿಗೆ ಪ್ರಿಯ. ಕುಬಸವಿಲ್ಲದ ಮಹಿಳೆಯರು ಕಂಕುಳನ್ನು ಒಂದು ಕೂದಲಿಲ್ಲದಂತೆ ನುಣುಪಾಗಿಟ್ಟು ಕೊಂಡು ಎಗ್ಗಿಲ್ಲದೇ ಕೈ ಚಲಿಸುವುದು ಕಂಡು ರೇಜರ್ ಇಲ್ಲದ ಕಾಲದಲ್ಲಿ ಏನು ಮಾಡುತ್ತಿದ್ದರೋ ಎಂಬ ಕುತೂಹಲವಾಗಿತ್ತು. ಹಾಗೆಂದು ಕೇಳಿದಾಗ ಒಂದು ಅಜ್ಜಿ ನಾಚುತ್ತ, 'ಮುಟ್ಟಾಗಿ ಮಿಂದ್ಕ ಬರುವಾಗ ಭತ್ತದ ಕಾಳ್ನ ಎಡ್ಡು ಬಟ್ನ ನಡೂಗಿಟ್ಟು ಕೂದ್ಲು ಸುತ್ತಿ ಎಳೀತಿದ್ದೇಂವು' ಎಂದು ನಾಚುತ್ತ ಹೇಳಿತ್ತು!

ಹಾಲಕ್ಕಿ ಗಂಡಸರ ವೇಷ ಬಹು ಸರಳ. ಕೆಲಸ ಕಾರ್ಯದ ಹೊತ್ತಿಗಾದರೆ ಒಂದು ಅಡ್ಡ ಮುಂಡುಪಂಚೆ, ಮೇಲೊಂದು ವಸ್ತ್ರ. ಉಳಿದಂತೆ ಮನೆಯಲ್ಲಾದರೆ ಒಂದು ಲಂಗೋಟಿ ಕಚ್ಚೆ. ಈಗ ಬಹುಮಟ್ಟಿಗೆ ವೇಷ ಬದಲಾಗಿದೆಯಾದರೂ ಕೇರಿ ಹೊಕ್ಕರೆ ಹಳೆಯ ಗಂಡಸರನ್ನು ಈ ವೇಷದಲ್ಲೇ ನೋಡಬಹುದು. ಹೊನ್ನಾವರಕ್ಕೆ ಬಂದಿದ್ದ ಇಟಾಲಿಯನ್ ಪ್ರವಾಸಿ ವಾರ್ತೆವ (ಕ್ರಿ.ಶ.1505) ಬರೆದಂತೆ: 'ವಿಜಯನಗರದ ನರಸಿಂಗನ (1487-1508) ಪಾಳೆಯಪಟ್ಟಾಗಿ ಹೊನ್ನಾವರವನ್ನು ಒಬ್ಬ ಕ್ರೈಸ್ತನಲ್ಲದ ನಾಯಕ ಆಳುತ್ತಿದ್ದ. ಆತ ಪೋರ್ಚುಗೀಸರ ಗೆಳೆಯ ಮತ್ತು ಒಳ್ಳೆಯ ಸ್ವಭಾವದವನು. ಸೊಂಟದ ಸುತ್ತ ಒಂದು ಬಟ್ಟೆಯಿಲ್ಲದೇ ನಗ್ನವಾಗೇ ತಿರುಗುತ್ತಿದ್ದ.'

ಹಾಲಕ್ಕಿ ಹೆಣ್ಣುಮಕ್ಕಳ ವೇಷ ಬಹುವಿಶಿಷ್ಟವಾದುದು. ಕುತ್ತಿಗೆಯ ಸುತ್ತ ರಾಶಿರಾಶಿ ಮಣಿಸರಗಳನ್ನು ಕೋದುಕೊಂಡ ಹೆಂಗಸರಿಗೆ ಅವು ಎಂದೂ ಭಾರ ಅನಿಸುವುದೇ ಇಲ್ಲ. ಮೈನೆರೆಯುವ ಮೊದಲೇ ಸಂಕ್ರಾಂತಿಯ ಶುಭದಿನದಂದು ಅಜ್ಜಿಮನೆಯವರು ಹಾಗೂ ಇನ್ನಿತರ ಹಿರಿಯರು ಸೇರಿ ಮಣಿ ಹಾಕಿರುತ್ತಿದ್ದರಂತೆ. ನಂತರ ಮದುವೆ ಮತ್ತಿತರ ಶುಭ ಕಾರ್ಯವಿದ್ದಾಗ ಮಣಿಸರಗಳು ಸೇರಿಕೊಳ್ಳುತ್ತಾ ಹೋಗಿ ಕೆಲ ಹಿರಿಯರ ಕುತ್ತಿಗೆ ತುಂಬಾ ಸರಗಳ ಸಾಲು. ಸಾಧಾರಣವಾಗಿ ಕಪ್ಪು ಮಣಿ, ಅದರ ಜೊತೆಗೆ ಹಳದಿ, ನೀಲಿ, ಹಸಿರು, ಅಪರೂಪಕ್ಕೆ ಕೆಂಪು ಮಣಿಗಳನ್ನೂ ಕಾಣಬಹುದು. ಮದುವೆಗೆ ಗುಂಡಿರುವ ಮಣಿಸರವೊಂದು ಜೊತೆ ಸೇರಿ ಗಂಡ ಸತ್ತಾಗ ಅದನ್ನು ಮಾತ್ರ ತೆಗೆಯಲಾಗುತ್ತದೆ. ಅವರು ಸೀರೆ ಉಡುವ ಪರಿಯೂ ಅನನ್ಯವಾದುದು. ಕರಾವಳಿ ಸೆಖೆಗೆ ಆ ಉಡುವ ಶೈಲಿ ಹೊಂದಿಕೊಳ್ಳುತ್ತದೆಯೇನೋ! ಕುಪ್ಪಸವಿಲ್ಲದ ಎದೆಯ ಮುಂಭಾಗವನ್ನು ಸುತ್ತಿಕೊಂಡು ಬರುವ ಸೀರೆಯ ಸೆರಗಿನ ತುದಿ ಹಿಂಬದಿಗೆ ಹೋದದ್ದೇ ಬಲ ಹೆಗಲನ್ನು ಹಾರಿ ಮುಂದಿನ ಭಾಗದೊಂದಿಗೆ ಗಂಟಾಗಿ ಬಂಧನಕ್ಕೊಳಗಾಗುತ್ತದೆ. 'ಗೇಟಿ ಸೀರೆ' ಎಂಬುದು ಈ ಶೈಲಿಯ ಹೆಸರು. ಅವರ ನೂರಾರು ಮಣಿಸರಗಳು ಎದೆಯ ಮೇಲೆ ಎಷ್ಟು ಬಿಗಿಯಾಗಿ ಕೂರುತ್ತವೆಂದರೆ ಬಹುಶಃ ಕೆಲಸ ಮಾಡುವಾಗ ಬಗ್ಗಿದರೂ ಎದ್ದರೂ ಅವರ ಸ್ತನಭಾಗವನ್ನು ಮಣಿಸರಗಳು ಮುಚ್ಚಿಟ್ಟುಕೊಂಡಿರುತ್ತವೆ! ಇಡೀ ಬೆನ್ನನ್ನು ತೆರೆದು ಓಡಾಡುವ ಹಳೆಯ ಹೆಣ್ಣುಮಕ್ಕಳನ್ನು ನೋಡುವಾಗ ಪ್ರಾಯಕಾಲದಲ್ಲಿ ಇವರೆಲ್ಲ ಎಷ್ಟು ಸೆಕ್ಸಿಯಾಗಿ ಕಾಣುತ್ತಿದ್ದಿರಬಹುದು ಎಂಬ ತುಂಟ ಊಹೆ ಸರಿದುಹೋಗುತ್ತದೆ. ಯಾವ ಕಾರಣಕ್ಕಾಗಿ ಅವರದು ತೆರೆದೆದೆಯಾಯಿತೋ! ಮೇಲುಡುಪು ಧರಿಸದ ಹಲವು ಅಬ್ರಾಹ್ಮಣ ಸಮುದಾಯಗಳು ಕರಾವಳಿಯುದ್ದ ಹಾಗೂ ಭಾರತದ ಇನ್ನೂ ಹಲವು ಕಡೆ ಕಂಡುಬರುತ್ತವೆ. ಕೇರಳದ ಶಾಣಾರ್‌ಗಳಂತೂ ಇಡೀ ಸಮುದಾಯವೇ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದಾಗ ತಮಗೆ ಮೇಲ್ಜಾತಿ ಹೆಂಗಸರು ತೊಡುವಂಥದ್ದೇ ಕುಪ್ಪಸ ಬೇಕೆಂದು ಪಾದ್ರಿಗಳು ತಯಾರಿಸಿದ್ದ ವಿಶೇಷ ವಿನ್ಯಾಸದ ಕುಪ್ಪಸವನ್ನು ನಿರಾಕರಿಸಿದ್ದರು. ಹಾಗೇ ಎಳವರೂ ಕೂಡಾ ತೆರೆದೆದೆಯವರೇ ಆಗಿದ್ದು ಸಮಾಜ ಸುಧಾರಕ ನಾರಾಯಣಗುರು ಮೈತುಂಬ ಬಟ್ಟೆ ಧರಿಸಲು ಸಲಹೆ ನೀಡಿದ್ದರು. ಈಗ ಕಾಲ ಬದಲಾಗಿ ಮೈತುಂಬ ಬಟ್ಟೆ ತೊಡುವ ನಿರ್ಧಾರಕ್ಕೆ ಬಂದಿದ್ದಾರೆ.

ಹಾಲಕ್ಕಿಗಳ ಆಹಾರ, ತಯಾರಿ ಸರಳವಾಗಿ ವಿಶಿಷ್ಟವಾಗಿದೆ. ಊಟಕ್ಕೆ ಕುಕ್ಕುರುಗಾಲಲ್ಲಿ ಕೆಲವರು ಮಣೆಮೇಲೆ ಕೂರುತ್ತಾರೆ. ಅವರ ಮುಖ್ಯ ಆಹಾರಧಾನ್ಯ ಬತ್ತ. ಹೆಚ್ಚುಕಡಿಮೆ ಎಲ್ಲಕ್ಕೂ ಅಕ್ಕಿಯನ್ನೇ ಬಳಸುತ್ತಾರೆ. ಅವಲಕ್ಕಿ, ದೋಸೆ, ಕಡುಬು, ರೊಟ್ಟಿಯಂತಹ ತಿಂಡಿಯಿಂದ ಹಿಡಿದು ಅನ್ನ-ಗಂಜಿವರೆಗೆ ಎಲ್ಲಕ್ಕೂ ಅಕ್ಕಿಯೇ. ಬಹುಪಾಲು ಜನ ಗದ್ದೆ ಹೊಂದಿದ್ದಾರೆ. ಮೊದಲಿನ ಕಾಲದಲ್ಲಿ ಅಡಿಕೆ ತೋಟ ಇರಲಿಲ್ಲವಂತೆ. ಬರೀ ಬತ್ತದ ಗದ್ದೆಗಳೇ. ಮಳೆ ಕಡಿಮೆಯಾದರೆ, ಕಲ್ಲುಗುಡ್ಡೆಯ ಮೇಲಿನ ಜಾಗಗಳಲ್ಲಿ ರಾಗಿ, ಉದ್ದು, ಹೆಸರು, ಅವಡೆ, ಈರುಳ್ಳಿ – ಹೀಗೇ ತಮಗೆ ಬೇಕಾದ್ದನ್ನೆಲ್ಲ ತಾವೇ ಬೆಳೆದುಕೊಳ್ಳುತ್ತಿದ್ದರು. ಕಬ್ಬು ಬೆಳೆದು ಬೆಲ್ಲ ಮಾಡಿಕೊಳ್ಳುತ್ತಿದ್ದರು. ದಿನನಿತ್ಯದ ಬಳಕೆಗೆ ಕುಚ್ಚಿಗೆಅಕ್ಕಿ ಬಳಸಿದರೆ, ಸ್ವಲ್ಪ ಬೆಳ್ತಿಗೆಅಕ್ಕಿಯನ್ನೂ ಮಾಡಿಟ್ಟುಕೊಂಡು ಹಬ್ಬಹುಣ್ಣಿಮೆ ಕಾರ್ಯಕಟ್ಟಲೆಗಳಿಗೆ ಬಳಸುತ್ತಾರೆ. ಕುಚ್ಚಿಗೆಅಕ್ಕಿ ಒಮ್ಮೆ ಬೇಯಿಸಿದ ಬತ್ತದಿಂದ ತಯಾರಾಗುವುದರಿಂದ ಅದು 'ಮುಸುರೆ', 'ಕಾರ್ಯಕಟ್ಲೆ





ಮಡಿ ದಿನಕೆ ಬಳಸಕ್ ಬರುದಿಲ್ಲ.' ಅವರ ಮುಖ್ಯ ತರಕಾರಿ 'ಹೊಳೆ ಬಾಳೆಕಾಯಿ,' ಎಂದರೆ ಮೀನು. ಮೀನೊಂದಿದ್ದರೆ ಮತ್ಯಾವ ತರಕಾರಿಯೂ ಬೇಡ, ಹಾಗೂ ದಿನನಿತ್ಯ ಎರಡು ಹೊತ್ತೂ ಮೀನು ತಿನ್ನಲು ಬೇಜಾರಿಲ್ಲ. 'ವಾರ'ದ ದಿನವಾದ ಶನಿವಾರ, ಸೋಮವಾರ; ಶ್ರಾವಣ ಮಾಸ; ಶುಭಕಾರ್ಯ ನಡೆವ ದಿನ; ದೇವಕಾರ್ಯದಂತಹ ಪೂಜೆ ಪುನಸ್ಕಾರ ನಡೆವ ದಿವಸಗಳಲ್ಲಿ ಮಾತ್ರ 'ಗೌಲು' ತಿನ್ನುವುದಿಲ್ಲ ಎಂದು ಸಂಕೋಚ, ಸಂಕಟ ತುಂಬಿ ಹೇಳುತ್ತಾರೆ. ಅಂಥ ದಿನಗಳಲ್ಲಿ ತರಕಾರಿಯೇ ಗತಿ. ತರಕಾರಿ ಎಂದರೆ 'ಬಟಾಟೆ, ಈರುಳ್ಳಿ, ಟೊಮ್ಯಾಟೋ'. ಬಟಾಟೆ ಎಂದರೆ ಆಲೂ, ವಾಯು. ಹಾಗಾಗಿ 'ತರಕಾರಿ ತಿಂದರೆ ವಾಯು' ಎನ್ನುತ್ತಾರೆ. ಪೇಟೆಯಿಂದ ತರಕಾರಿ ತರುವುದು ಮನೆಯಲ್ಲಿ ವಿಶೇಷ ಕಾರ್ಯವಿರುವಾಗ ಅಷ್ಟೇ. ಮೊದಲೆಲ್ಲ ಗದ್ದೆ ತೋಟಗಳಲ್ಲಿ ಬೆಳೆಯುತ್ತಿದ್ದ, ಗುಡ್ಡದ ಮೇಲೆ ಸಿಗುತ್ತಿದ್ದ ಕಾಯಿ–ಸೊಪ್ಪೇ ತರಕಾರಿಗಳು. ಹಾಲು ಮಜ್ಜಿಗೆ ಬಳಕೆ ಕಡಿಮೆಯಿರುವುದರಿಂದ ('ಅದು ಪಿತ್ತ, ತಂಪು') ಹೊಟ್ಟೆ ತಣ್ಣಗಿಡಲು 'ರಾಗಿ ಬೋಳು' ಬಳಕೆಯಲ್ಲಿದೆ. ವರ್ಷಕ್ಕೊಮ್ಮೆ 'ದೊಡ್ಡ ಬ್ಯಾಟೆ'ಗೆ ಹೋಗಿ ಬೇಟೆಯಾಡಿ ತಂದರೆ ಮೊಲ, ಕೆಪ್ಪ ಹಕ್ಕಿ, ಕಡ, ಹಂದಿ, ಕಣೆಹಂದಿಗಳ ಮಾಂಸ. ಇಲ್ಲದಿದ್ದರೆ ಮೀನು, ಕೋಳಿಯ ಬಳಕೆ ಹೆಚ್ಚು. ಜಾತ್ರೆಯ ದಿನಗಳಲ್ಲಿ ವಿಶೇಷ ಎಂದರೆ ಅಕ್ಕಿ ಕಡುಬು, ಅಕ್ಕಿ ಪಾಯ್ಸ, ಎಲೆ ರೊಟ್ಟಿ, ಸಾಬಕ್ಕಿ ಪಾಯ್ಸ, ಶಿರಾ ಹೀಗೇ. ಜಾತ್ರೆ ಮರುದಿನ ಹೊಳೆ ಹಬ್ಬಕ್ಕೆ, ಹಿರಿಯರ ಹಬ್ಬಕ್ಕೆ ಮಾಂಸದ ಊಟ.

ಗೌಲು ಎಂದರೆ ವಾಸನೆ. ಮೀನು ವಾಸನೆ ಬೀರುವುದರಿಂದ ಅದಕ್ಕೆ ಗೌಲು ಎಂಬ ಹೆಸರು ಬಂದು ಈಗ ಎಲ್ಲ ಮಾಂಸಾಹಾರಕ್ಕೂ ಗೌಲು ಎಂದೇ ಹೇಳುತ್ತಾರೆ. ಗೌಲು ಬೇಯಿಸಲು ಬೇರೆಯೇ ಪಾತ್ರೆ – ಒಲೆಯ ವ್ಯವಸ್ಥೆಯಿದ್ದು ಅಡುಗೆ ಮನೆಯ ಹೊರಗೆ ಗೌಲು ಒಲೆ ಇರುತ್ತದೆ. ಹೊರಗೆ ಮೀನು ಕತ್ತರಿಸಿ, ಆ ಒಲೆಯಲ್ಲಿ ಬೇಯಿಸಿ ಉಂಡು ಉಳಿದಿದ್ದನ್ನು ಬೆಕ್ಕಿನ ಕೈಯಿಂದ ರಕ್ಷಿಸಿಡಲು ಸೂರಿನಿಂದ ನೇತುಬಿದ್ದ 'ನಿಲ'ದಲ್ಲಿ ಜಾಗ. ಎಲ್ಲೋ ಕೆಲವರು ಗೌಲು ತಿನ್ನದವರು ಇದ್ದು, ಅವರಿಗೆ ಪುರೋಹಿತರಷ್ಟು ಗೌರವ. ಹೆಚ್ಚಾಗಿ ತಿರುಪತಿ ರಿಟರ್ನ್ಡ್, ಪೂಜಾಕಾರ್ಯ ನಡೆಸುವವರು ಗೌಲು ಮುಟ್ಟದೇ 'ಶುಚಿ'ಯಾಗಿರುತ್ತಾರೆ. ಇವರ ದೇವರುಗಳೂ ಬಹಳ ಕಟ್ಟುನಿಟ್ಟು. ಜಟಗ, ಚೌಡಿ, ಮಾಸ್ತಿ, ಕಟ್ಟೆದೇವರುಗಳಲ್ಲದೇ ತಿರುಪತಿ ತಿಮ್ಮಪ್ಪ, ಧರ್ಮಸ್ಥಳದ ಮಂಜುನಾಥ, ಅಣ್ಣಪ್ಪ, ಸುಬ್ರಹ್ಮಣ್ಯ, ಇಡಗುಂಜಿ ಗಣಪತಿ, ಅಮ್ಮನವರು – ಎಲ್ಲ ದೇವರೂ ದೇವರ ಗೂಡಿನಲ್ಲಿ ಸ್ಥಾನಪಡೆದಿದ್ದಾರೆ. ವರ್ಷಕ್ಕೊಮ್ಮೆ ದೇವಕಾರ್ಯ ಮಾಡಿ ನೆಂಟರಿಷ್ಟರಿಗೆಲ್ಲ ಊಟಹಾಕುತ್ತಾರೆ.

ಅಕ್ಕಿ ಅಳೆಯಲು ಬಳಸುವ ಅಳತೆ 'ಸಿದ್ದೆ'. ಆರು ಸಿದ್ದೆಗೆ ಒಂದು ಕೊಳಗ. ಕೆಲವರ ಪ್ರಕಾರ ಒಂದು ಕೊಳಗ ಎಂದರೆ 2 ಕೆಜಿ. ಮತ್ತೆ ಕೆಲವರಿಗೆ ಎರಡೂವರೆ ಕೆಜಿ. ದ್ರವ ಪದಾರ್ಥ ಅಳೆಯಲು ಬಳಸುವ ಅಳತೆ 'ಸೇರು'. ನಾಕೂವರೆ ಸೇರಿಗೆ ಒಂದು ಲೀಟರ್. ಅಪ್ಪಟ ಕನ್ನಡಿಗರಾದರೂ ಅಪರೂಪದ ಪದಪ್ರಯೋಗ, ಶೈಲಿ ಅವರ ಕನ್ನಡದ್ದು. ಮೊದಮೊದಲು ಏನು ಹೇಳುತ್ತಿದ್ದಾರೆಂದೇ ತಿಳಿಯದು. 'ಞ,ಸ' ಗಳ ಬದಲು 'ಳ,ಚ' ಬಳಸುತ್ತಾರೆ. ದ್ರವ ಪದಾರ್ಥ ಸ್ವಲ್ಪವೇ ಎಂದು ಹೇಳಲು 'ಹನಿ' ಎಂಬ ಪ್ರಯೋಗವೂ, ತುಂಬ ಎನ್ನಲು 'ರಾಶಿ' ಎನ್ನುವ ಪ್ರಯೋಗವೂ ಚಾಲ್ತಿಯಲ್ಲಿವೆ. ('ಒಂದ್ ಹನಿ ಸಾರು, ರಾಶಿ ಚಾ ಕುಡಿಬಾರ್ದು')

ಸಾಮಾನ್ಯವಾಗಿ ಬಳಸುವ ಖಾದ್ಯತೈಲ ತೆಂಗಿನೆಣ್ಣೆ. ಮೀನು, ದೋಸೆ ಸುಡಲು ಪಾಮ್ಎಣ್ಣೆ ಅಥವಾ ಸೇಂಗಾಎಣ್ಣೆ. ಶಿರಾ (ಕೇಸರಿಬಾತ್), ಕೋಳಿ ಪದಾರ್ಥಕ್ಕೆ ಡಾಲ್ಡಾ. ತೆಂಗಿನಕಾಯಿ ಬಳಸದೇ ಯಾವ ಪದಾರ್ಥವೂ ಮಾಡಲು ಬಾರದೆನ್ನುವಷ್ಟು ಜಾಸ್ತಿ ಬಳಕೆ. ಬೇಳೆಯ ಬಳಕೆ ಕಡಿಮೆ. ಸಾರು ಎಂದರೆ ಮೀನುಸಾರು. ಅಥವಾ ಆಯಾಯಾ ತರಕಾರಿ, ಕೋಳಿ, ಮಟನ್‌ಸಾರು. ಟೊಮ್ಯಾಟೋ ಸಾರಿಗೆ ನೀರುಸಾರೆಂಬ ಹೆಸರು. ಮೀನುಸಾರಿಗೆ ಹುಳಿ ಬಳಕೆ ಜಾಸ್ತಿ. ಜುಮ್ಮನಕಾಯಿ ವಿಶೇಷ ಮಸಾಲೆ ಪದಾರ್ಥ. ಸೀಸನ್ ಇದ್ದಾಗ ಹುಳಿಗೆ ಬಿಂಬ್ಲಿ ಕಾಯಿ, ಗರಲ ಕಾಯಿ (ಕವಳೆ ಕಾಯಿ), ವಾಟೆಹುಳಿಯನ್ನೂ ಬಳಸುವರು. ಉಳಿದಂತೆ 'ಹುಳಿಸೆಹಣ್ಣು' ಇದ್ದೇ ಇದೆ. 'ಗೌಲು' ಹೆಚ್ಚಿರುವ ತಾರ್ಲೆ ಮೀನಿಗೆ ಹುಳಿ, ಕಾರ ಹೆಚ್ಚು ಬೇಕು. ಅದು ಬಿಟ್ಟರೆ ಉಳಿದ ಮೀನು ಸಾರಿಗೆ ಒಂದೇ ಥರದ ಮಸಾಲೆ. ಮೀನನ್ನು ಬೇಯಿಸಿ ಸಾರು ಮಾಡಬಹುದು, ಅಥವಾ ವಿವಿಧ ಬಗೆಗಳಲ್ಲಿ ಹುರಿಯಬಹುದು ಅಥವಾ ಕರಿಯಬಹುದು. ಮೆಣಸಿನ ಹಿಟ್ಟು, ಬೆಳ್ಳುಳ್ಳಿ ರುಬ್ಬಿ ಮಸಾಲೆ ಹಚ್ಚಿ ಮೀನನ್ನು ಎಣ್ಣೆಯಲ್ಲಿ ಕರಿಯುತ್ತಾರೆ. ಅಥವಾ ದೋಸೆಬಂಡಿಯ (ಕಾವಲಿ)ಯ ಮೇಲೆ 'ಸುಡುತ್ತಾರೆ' (ತವಾ ಫ್ರೈ). ಅಥವಾ ರವೆಯಲ್ಲಿ ತಿರುಗಿಸಿ ಮುರುಗಿಸಿ ಕಾವಲಿ ಮೇಲೆ 'ಸುಡುತ್ತಾರೆ' (ರವಾ ಫ್ರೈ). ತೆಂಗಿನ ಕಾಯಿ, ಒಣಮೆಣಸು, ಅರಿಶಿನ, ಹುಣಿಸೆಹಣ್ಣು, ಬೆರಕಿಸಾಮಾನು (ಗರಂಮಸಾಲಾ), ಬಡೇಸೋಪು, ಓಮ, ಬೆಳ್ಳುಳ್ಳಿ ಹಾಕಿ ಅರೆದ ಮಸಾಲೆ ಮೀನುಸಾರಿಗೆ. ಏಡಿಸಾರು ಅಪರೂಪ. ಮಳೆಗಾಲದಲ್ಲಿ ಹೆಂಗಸರಿಗೆ ಕೈತುಂಬ ಕೆಲಸ ಇರುವುದರಿಂದ ಏಡಿ ಹಿಡಿದು ತರಲು ಪುರುಸೊತ್ತಿರುವುದಿಲ್ಲ. ಮನೆಯಲ್ಲಿ ಕೆಲಸಕ್ಕೆ ಹೊರಗೆ ಹೋಗದ ಹೆಂಗಸರು ಅಥವಾ ಮುದುಕರು ಏಡಿ ತಂದರೆ ಏಡಿಸಾರು. ಅದು





ಹುಳಗೆ ಇರುವುದರಿಂದ ಅದಕ್ಕೆ ಹುಳಿ ಹಾಕುವುದಿಲ್ಲ. ಅಣ್ಬ(ಅಣಬೆ) ಮತ್ತು ಏಡಿ ಒಟ್ಟು ಬೇಯಿಸಿದರೆ ಅದು ವಿಷ. ಅದಕ್ಕೇ ಆ ಎರಡನ್ನೂ ಸೇರಿಸಿ ಸಾರು ಮಾಡುವುದಿಲ್ಲ. ಅಣ್ಬದಿಂದ ಸುಕ್ಕಾ (ಪಲ್ಯ) ಹಾಗೂ ಸಾರು ಮಾಡುತ್ತಾರೆ. ಬಳಚು(ಚಿಪ್ಪು) ಸಾರಿಗೆ ಮಿಶ್ರವಾಗಿ ಬಳಕೆಯಾಗುತ್ತದೆ. ಬಸಲೆಸೊಪ್ಪು ಬಳಚುಸಾರು ರುಚಿ. ಬಸಳೆಸೊಪ್ಪು+ಚಟ್ಲಿ(ಸಣ್ಣ ಜಾತಿಯ ಸೀಗಡಿ); ಬದನೆ+ಚಟ್ಲಿ; ಬದನೆ+ಬಳಚು ಇವೆಲ್ಲ ಒಳ್ಳೆಯ ಕಾಂಬಿನೇಷನ್. ಸಾರಿಗೆ ತೆಂಗಿನಕಾಯಿ, ಒಣಮೆಣಸು, ಕೊತ್ತಂಬರಿ, ಜೀರಿಗೆ, ಬೆಳ್ಳುಳ್ಳಿ ಹಾಕಿ ರುಬ್ಬಿದ ಮಸಾಲೆ ಹಾಕುತ್ತಾರೆ. ವರ್ಷಕ್ಕೊಮ್ಮೆಯಾದರೂ ಅಣ್ಬ ತಿನ್ನಬೇಕೆಂಬ ಪ್ರತೀತಿ. ಕೆಸುವಿನ ಸೊಪ್ಪಿನಲ್ಲಿ ಸಾರು, ಪಲ್ಯ ಮಾಡುತ್ತಾರೆ. ಆದರೂ ಅದು 'ಗರಮಿ' ಎಂದು ಅದರ ಬಳಕೆ ಕಡಿಮೆ. ಬಾಳೆಕಾಯಿ, ಕಪ್ಪು ಕೆಸಿನ ಗೆಡ್ಡೆ, ಪಂಜರ ಗೆಡ್ಡೆಯಲ್ಲಿ ಪಲ್ಯ, ಸಾರು, ಬಾಜಿ ಮಾಡುತ್ತಾರೆ.

ಹೆಂಗಸರು ಉತ್ತಮ ಕೆಲಸಗಾರರಾದ್ದರಿಂದ ದಿನನಿತ್ಯಕ್ಕೆ ಅಡುಗೆ ಕೆಲಸ ಮಾಡುತ್ತ ಕೂತು ಹೆಚ್ಚು ಸಮಯ ಕಳೆಯುವುದಿಲ್ಲ. ಬೆಳಿಗ್ಗೆ ಚಾ ಕಣ್ಣು (ಡಿಕಾಕ್ಷನ್) ಕಾಸಿ ಕುಡಿದು, ರಾತ್ರಿ ಉಳಿದ ತಂಗಳನ್ನ ಅಥವಾ ಹುಡಿ ಅವಲಕ್ಕಿಯನ್ನು ಚಾ ಅಥವಾ ಬಿಸಿನೀರಿನ (ಬೆಚ್ಚನ್ನ ಸಕ್ಕರೆ ನೀರು) ಜೊತೆ ತಿಂದು ಹೊರಟರೆ ಮಧ್ಯಾಹ್ನದ ಊಟವೇ ಗಟ್ಟಿ. ಉಳಿದ ಅನ್ನವನ್ನು ನೀರಿನಲ್ಲಿ ಹಾಕಿಟ್ಟು, ನಂತರ ನೀರು ಬಸಿದು ಉಣ್ಣುತ್ತಾರೆ. ಈ ತಂಗಳೂಟ 'ತಂಪು' ಎಂದು ಪ್ರತೀತಿ. ಅದಕ್ಕೆ 'ತಣ್ಣಿಅನ್ನ'ವೆಂಬ ಹೆಸರು. ಹೊರ ದುಡಿಯುವವರು ಹೆಚ್ಚಾಗಿ 'ಒಡೆಯರ ಮನೆಯಲ್ಲಿ' ಮಧ್ಯಾಹ್ನ ಊಟ ಮಾಡುತ್ತಾರೆ. ಸ್ವಂತ ಜಮೀನಿದ್ದರೂ ಕೂಡಾ ಗಂಡಸರು– ಹೆಂಗಸರು ಹೊರಗೆ ಕೆಲಸ ಮಾಡುವುದು ಸರ್ವೇಸಾಮಾನ್ಯ. ಸಂಜೆ ಬಂದ ಮೇಲೆ 'ಮೀಯುವುದು'. ಮಿಂದು ರಾತ್ರಿಯ ಊಟ ಗಡದ್ದು. ರಾತ್ರಿ ದೊಡ್ಡ ಪಾತ್ರೆಯಲ್ಲಿ ಕುಚ್ಚಕ್ಕಿ ಬೇಯಿಸಿಟ್ಟರೆ ಮರು ಬೆಳಗು, ಮಧ್ಯಾಹ್ನದವರೆಗೆ ಬರುತ್ತದೆ. ಕೆಲ ಹೆಂಗಸರಷ್ಟೆ ಕವಳೆಕಾಯಿ ಬಿಡುವಾಗ ಒಂದಷ್ಟು ತಂದು, ಅಥವಾ ಮಾವಿನಕಾಯಿಯಲ್ಲಿ ಸ್ವಲ್ಪ ಉಪ್ಪಿನಕಾಯಿ ಮಾಡಿಟ್ಟರೆ ಮುಗಿಯಿತು. ಮತ್ತೆ ಉಳಿದಂತೆ ಹಪ್ಪಳ, ಸಂಡಿಗೆ ಎಂದು ವರ್ಷಾವಧಿ ಅಡುಗೆ ತಯಾರಿ ಕಡಿಮೆ. ಸೋರೆಕಾಯಿ, ಮಗೆಕಾಯಿ(ಬಣ್ಣದ ಸೌತೆ), ಚೀನೀಕಾಯಿ, ಕುಂಬಳ ಕಾಯಿ, ಈರುಳ್ಳಿ ಪೊತ್ತೆಗಳನ್ನು ಮಡ್ಲು(ತೆಂಗಿನಗರಿ)ಯಿಂದ ಮಾಡಿಗೆ ನೇತು ಹಾಕಿದ್ದು ಸರ್ವೇಸಾಮಾನ್ಯವಾಗಿ ಎಲ್ಲ ಮನೆಗಳಲ್ಲಿ ಕಂಡುಬರುತ್ತದೆ.

ಬಸುರಿಯನ್ನು, ಮದುಮಕ್ಕಳನ್ನು, ತಿರುಪತಿಯಂತಹ ದೂರ ಯಾತ್ರೆಗೆ ಹೊರಟವರನ್ನು ಊಟಕ್ಕೆ ಕರೆಯುವುದು ಸಾಮಾನ್ಯ. ಗಂಡ ಸತ್ತವರು, ಮಕ್ಕಳು ಸತ್ತವರನ್ನು ಊಟಕ್ಕೆ ಕರೆಯುವುದೂ ಚಾಲ್ತಿಯಲ್ಲಿರುವ ವಾಡಿಕೆ. ಒಂದು ಕುಟುಂಬದ ಕಷ್ಟ, ಸುಖ, ದುಃಖಗಳನ್ನೆಲ್ಲ ಒಬ್ಬೊಬ್ಬರ ಮನೆಗೆ ಊಟಕ್ಕೆ ತೆರಳಿ ಹಂಚಿಕೊಳ್ಳುವ ವಿಧಾನವಿರಬಹುದು ಇದು.

ಹುಟ್ಟಿದ ಕೂಸಿಗೆ ಎಣ್ಣೆನೀರು ಹಾಕುವುದು ತುಂಬ ಮುಖ್ಯವಾದ ವಿಷಯ. ಸರಿಯಾಗಿ ಎಣ್ಣೆನೀರು ಕಂಡರೆ ಕೂಸು ಮೈತುಂಬಿ ಬೆಳೆಯುತ್ತದೆ, ಕೈಕಾಲು ಗಟ್ಟಿಯಾಗುತ್ತದೆ ಎಂಬ ನಂಬಿಕೆ. ಮಕ್ಕಳಿಗೆ ಮೊದಲೆಲ್ಲ ತಾಯಿ ಹಾಲು. ನಂತರ ಗಂಜಿ ತಿಳಿ, ನುರಿದ ಕುಚ್ಚಿಗೆ ಅನ್ನವೇ ಆಹಾರ. ಬಾಣಂತಿಯರಿಗಂತೂ ಪಥ್ಯದ ಕಟ್ಟುಪಾಡುಗಳು ತೀರಾ. 'ಕೊಟ್ಟೆಕೊನೆ' ಎಂಬ ತುಪ್ಪ+ತೆಂಗಿನಕೊನೆ(ಅರಳದ ಸಿಂಗಾರ)+ಬೆಲ್ಲ+ಕಲ್ಲುಸಕ್ಕರೆಯಂಥ ತುಟ್ಟಿ ಪದಾರ್ಥಗಳು ಹಾಕಿ ತಯಾರಾದ ಔಷಧಿ ಕೊಟ್ಟರೆ ಅದೇ ಬಾಣಂತಿ ಔಷಧಿ. ಮಿಕ್ಕಂತೆ ಮೂರು ತಿಂಗಳು ಬಾಣಂತಿಗೆ ಬರೀ ಕಾಯಿ ಚಟ್ನಿ, ಮೆಣಸಿನಕಾಳಿನ ಹಿಟ್ಟು, ಶುಂಠಿ ಚಟ್ನಿ ಇಂಥ 'ಗರಮಿ' ಪದಾರ್ಥಗಳೇ. ಕುಡಿಯಲು ನೀರು ಕೊಡುವುದು ತುಂಬ ಕಡಿಮೆ. ಅವರ ಪ್ರಕಾರ ಬಾಣಂತಿಗೆ 'ಹೊಟ್ಟೆ ಒಣಗಬೇಕು' – ಎಂದರೆ ಮಲಬದ್ಧತೆಯಾಗಬೇಕು. 'ಒಳಗೆ ಗಾಳಿ ಹೋಗದಂತೆ' ಕಾಲಮೇಲೆ ಕಾಲು ಹಾಕಿ ಮಲಗಬೇಕು.

ಗಟ್ಟಿಮುಟ್ಟಾಗಿ ಕೆಲಸ ಮಾಡಿಕೊಂಡಿರುವ ಈ ಜನರಿಗೆ ಮುಖ್ಯವಾಗಿ ಕಾಡುವುದು ಪೌಷ್ಟಿಕಾಂಶ ಕೊರತೆ. ಅದು ಬಡತನದಿಂದ, ಆಹಾರ ಕೊರತೆಯಿಂದ ಬಂದಿದ್ದಲ್ಲ. ಆಹಾರ ಕುರಿತ ಅಜ್ಞಾನದಿಂದ ಬಂದಿದ್ದು. ಜಂತುಹುಳ ಬಾಧೆಗೋ, ತರಕಾರಿಯ ಕಡಿಮೆ ಬಳಕೆಗೋ, ಕಟ್ಟುನಿಟ್ಟು ನಿಯಮಗಳಿಗೋ, ಕೂಡುಕುಟುಂಬಗಳ ನಿಭಾಯಿಸುವಿಕೆಯ ಕಷ್ಟವೋ – ಅಂತೂ ರಕ್ತಹೀನತೆ ಸಾಮಾನ್ಯವಾಗಿ ಕಂಡುಬರುತ್ತದೆ. ಅದರಲ್ಲೂ ಮಕ್ಕಳು, ಮುದುಕರಲ್ಲಿ ಜಾಸ್ತಿ. ಮಕ್ಕಳಿಗೆ ಅದು ಕೊಟ್ಟರೆ ತಂಡಿ, ಇದು ಕೊಟ್ಟರೆ ನಂಜು, ಮತ್ತೊಂದು ಶೀತ ಎಂದು ಪಥ್ಯ ಅತಿಯಾಗಿ ಅಪೌಷ್ಟಿಕತೆ ಕಾಣಿಸಿಕೊಳ್ಳುತ್ತದೆ.

ಹಾಲಕ್ಕಿ ಸಮುದಾಯ ತನ್ನದೇ ಆದ ಮದುವೆ–ಶ್ರಾದ್ಧ–ದೈವೀ ಆಚರಣೆಗಳನ್ನು ಹೊಂದಿದೆ. ಸಮೃದ್ಧ ಜಾನಪದವನ್ನೂ ಹೊಂದಿದೆ. ಹೋಳಿಹಬ್ಬಕ್ಕಿಂತ ಮುಂಚೆ ಅವರು ಕಟ್ಟುವ 'ಸುಗ್ಗಿ' ಪ್ರಖ್ಯಾತವಾದ ಹಾಡು, ಕುಣಿತವಾಗಿದೆ. ಇದಲ್ಲದೆ ಗುಮಟೆಪಾಂಗ್ ಮತ್ತಿತರ ಹತ್ತಾರು 'ಪದ', ಆಚರಣೆಗಳೂ ಇವೆ. ಸ್ಥಳೀಯ ಜಾನಪದ ವಿದ್ವಾಂಸರು ಹಾಗೂ ಜಾನಪದ ತಜ್ಞರು ಅವನ್ನೆಲ್ಲ ಸಂಗ್ರಹಿಸಿ, ದಾಖಲು ಮಾಡಿಟ್ಟಿದ್ದಾರೆ. ಸುಕ್ರಿ ಬೊಮ್ಮನಗೌಡರಂತಹ ಸಾವಿರಾರು ಹಾಡುಗಳನ್ನು ಎದೆಯಲ್ಲಿಟ್ಟುಕೊಂಡ ಅನಕ್ಷರಸ್ಥ ಮಹಿಳೆ ಹಾಲಕ್ಕಿ ವಿಶ್ವಕೋಶವೇ ಆಗಿದ್ದಾರೆ. ಹಾಲಕ್ಕಿಗಳಲ್ಲಿ ಈಗಲೂ ವಿದ್ಯಾಭ್ಯಾಸ ಮಟ್ಟ ತುಂಬ ಕಡಿಮೆ. ಕೈಬೆರಳೆಣಿಕೆ ಯಷ್ಟು ಸರ್ಕಾರಿ ನೌಕರಸ್ಥರಿದ್ದಾರೆ. ಶಿಕ್ಷಕರು, ವೈದ್ಯರು, ಇಂಜಿನಿಯರ್ ಆದವರು ಒಬ್ಬಿಬ್ಬರು ಕಾಣಿಸುತ್ತಾರಷ್ಟೆ. ಬಹುಪಾಲು ಹೆಣ್ಣುಮಕ್ಕಳು ಎಸ್ಸೆಲ್ಸಿ ಆಸುಪಾಸು ಶಾಲೆ ಬಿಟ್ಟರೆ ಹುಡುಗರಂತೂ ಅದಕ್ಕಿಂತ ಮೊದಲೇ ಶಾಲೆ ಬಿಡುತ್ತಾರೆ.



ಇಂಗ್ಲಿಷ್ ಅವರ ಪ್ರಮುಖ ಶತ್ರು. ಇಂಗ್ಲಿಷ್ ಅಕ್ಷರವಾಗಲೀ, ಉಚ್ಚಾರಣೆಯಾಗಲೀ, ವ್ಯಾಕರಣವಾಗಲೀ ತಲೆಬುಡ ಅರ್ಥವಾಗದೇ ಇಂಗ್ಲಿಷ್ ಮಾಸ್ತರಿಗೆ ಹೆದರೇ ಶಾಲೆ ಬಿಟ್ಟಿರುವುದಾಗಿ ಎಷ್ಟೋ ಮಕ್ಕಳು ಹೇಳುತ್ತವೆ. ಸ್ತ್ರೀಶಕ್ತಿ ಸಂಘಗಳ ಎಷ್ಟೋ ಮಹಿಳೆಯರು ಶಿಕ್ಷಣದ ಮಹತ್ವ ಅರಿತು ತಮ್ಮ ಮಕ್ಕಳು ಹೇಗಾದರೂ ಶಾಲೆ ಕಲಿಯುಲಿ ಎಂದು ಶಾಲೆ ಬಿಟ್ಟವರನ್ನು 'ಬುದ್ಧಿಮಾತು' ಹೇಳಲು ಕರೆತಂದಾಗ ಈ ಸಮಸ್ಯೆ ಗೊತ್ತಾಯಿತು. ಸೊಪ್ಪು, ಕಟ್ಟಿಗೆ, ದರಕು ಒಟ್ಟುಮಾಡಲಾಗದೇ; ಮರ ಹತ್ತಲಾರದೇ; ಗದ್ದೆನೆಟ್ಟ-ಕೊಯ್ಲು ತಿಳಿಯದೇ ಬರೀ ಶಾಲೆ ಕಲಿತರೇನು ಉಪಯೋಗ ಎನ್ನುವುದು ಪಾಲಕರ ಧೋರಣೆ.

ಉಳಿದೆಲ್ಲ ಜಾತಿಗಳಂತೆಯೇ ಹಾಲಕ್ಕಿ ಸಮುದಾಯವೂ ಅಂತರ್ಜಾತಿ ಮದುವೆಗಳಿಗೆ ತೀವ್ರವಾಗಿ ಪ್ರತಿಕ್ರಿಯಿಸುತ್ತದೆ. ತಮ್ಮ ಜಾತಿ ಯಾವ ಜಾತಿಗೂ ಕಡಿಮೆಯಿಲ್ಲದಿರುವಾಗ, ಹೆಣ್ಣು-ಗಂಡು ಬರವಿಲ್ಲದೇ ಇರುವಾಗ ಏಕೆ ಬೇರೆ ಜಾತಿ-ಧರ್ಮದವರನ್ನು ಮದುವೆಯಾಗಬೇಕೆಂದು ಹಿರಿಯರು ಪ್ರಶ್ನಿಸುತ್ತಾರೆ. ಕೆಲಸಕ್ಕಾಗಿ ದೂರದೂರುಗಳಿಗೆ ಇತ್ತೀಚೆಗೆ ಹೋಗತೊಡಗಿರುವ ಯುವ ಸಮೂಹ ಅಂತರ್ಜಾತಿ ಮದುವೆಯಾಗ ಹೊರಟಾಗ ಹಿಂಸಾತ್ಮಕ ಪ್ರತಿಕ್ರಿಯೆ ವ್ಯಕ್ತವಾಗಿದ್ದೂ ಇದೆ.

ಈ ಸಮುದಾಯವು ಬುಡಕಟ್ಟುಗಳ ಎಲ್ಲ ಲಕ್ಷಣ ಹೊಂದಿದ್ದೂ 'ಪರಿಶಿಷ್ಟ ವರ್ಗ'ಕ್ಕೆ ಸೇರಿಸಲ್ಪಟ್ಟಿಲ್ಲ. ಈ ಸಮುದಾಯದಿಂದ ಹೊರಹೊಮ್ಮಿರುವ ಕೆಲವು ರಾಜಕೀಯ ಮುಖಂಡರು ಹಾಗೂ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿದ್ದ ದ್ವಾರಕಾನಾಥ್ ಅವರು ಈ ಕುರಿತು ಪ್ರಯತ್ನ ನಡೆಸಿದ್ದರಾದರೂ ಅದು ಯಶಸ್ಸು ಕಾಣಲಿಲ್ಲ.

ಉಳಿದ ಬುಡಕಟ್ಟುಗಳಂತೆಯೇ ಹಾಲಕ್ಕಿಗಳೂ ನಿಧಾನ ಹೊರ ಜಗತ್ತಿಗೆ ಕಣ್ಣು ತೆರೆದುಕೊಳ್ಳುತ್ತಿದ್ದಾರೆ. ಶಿಕ್ಷಣ ಪಡೆಯುತ್ತಿದ್ದಾರೆ. ಸೈನ್ಯ ಸೇರುತ್ತಿದ್ದಾರೆ. ಹೊರರಾಜ್ಯಕ್ಕೆ ಕೆಲಸ ಹುಡುಕಿ ವಲಸೆ ಹೋಗತೊಡಗಿದ್ದಾರೆ. ಅದೇವೇಳೆ ಪಾರಂಪರಿಕ ಸುಗ್ಗಿ ಕಟ್ಟುವವರೂ, ಹಾಡುಹಸೆ ಹೇಳುವವರೂ ಕಡಿಮೆಯಾಗಿ ಸುಗ್ಗಿ ಕುಣಿತಕ್ಕೂ ಕ್ಯಾಸೆಟ್ ಹಾಡು ನುಸುಳತೊಡಗಿದೆ. ಆಧುನಿಕ ಜನಪದ ಹಾಡಿಗೆ ತಕ್ಕಂತೆ ಕಾಲಹೆಜ್ಜೆ ಕುಣಿಯುತ್ತಿದೆ. ವೋಮು, ಪಾಯು, ಬೆಳಿಯ, ಕರಿಯ, ರಾಮ, ತಿಮ್ಮ, ಜಟ್ಟಿ, ಕುಪ್ಪ, ಗಣಪ, ಬೀರ, ಕ್ಯಾಸ, ದ್ಯಾವ, ಸುಬ್ರಾಯನಂತಹ ಹೆಸರುಗಳು ಹಿನ್ನೆಲೆಗೆ ಸರಿಯುತ್ತಿವೆ. ಗಣಪಿ, ಕೇಶಿ, ಸುಬ್ಬಿ, ದೊಡಮಗು, ಸಣಮಗು, ಕರಿಮಗು, ಬಿಳಿಮಗು, ಕುಪ್ಪಿ, ಲಕ್ಕು, ದೇವಿ, ತಿಮ್ಮಿಯರೆಲ್ಲ ಮರೆಯಾಗತೊಡಗಿದ್ದಾರೆ. ಈಗ ಬಹುಪಾಲು ಕಾರ್ಯಗಳಿಗೆ ವೈದಿಕರ ಸಹಾಯ ಕೇಳಲಾಗುತ್ತಿದೆ. ಹೆಸರಿನ ಆರಂಭದ ಅಕ್ಷರ ಯಾವುದಿರಬೇಕೆಂದು ಹುಟ್ಟಿದ ವೇಳೆ ನೋಡಿ ಜಾತಕ ಬರೆವ ವೈದಿಕರು ಹೇಳಿದರೆ ಕೊನೆಯ ಅಕ್ಷರವನ್ನು ಪ್ರಾಸಕ್ಕೆ ತಕ್ಕಂತೆ ಜೋಡಿಸುತ್ತಾರೆ. ಹೀಗಾಗಿ ಮೋಕ್ಷಿತ-ದೀಕ್ಷಿತ-ಯಕ್ಷಿತಾ-ತ್ರಿನಿತಾದಂತಹ ಅರ್ಥವಿಲ್ಲದ ಹೆಸರುಗಳೂ ಕೇಳತೊಡಗಿವೆ.

ಬದಲಾವಣೆಯ ಗಾಳಿ ಬೀಸುವಾಗ ಅದು ಕಸ-ತರಗೆಲೆಯನ್ನೂ ಹಾರಿಸುತ್ತದೆ. ಧೂಳನ್ನೂ ಎಬ್ಬಿಸುತ್ತದೆ. ಸಣ್ಣಪುಟ್ಟ ಸ್ಥಾವರ ರಚನೆಗಳು ಬಿದ್ದುಹೋಗುತ್ತವೆ. ಒಮ್ಮೆ ಎಲ್ಲ ಅಯೋಮಯವಾಗಿ ಕಾಲ ತಿಳಿಗೊಳಿಸಿದ ಮೇಲಷ್ಟೇ ಉಳಿದದ್ದೆಷ್ಟು, ಹಾಳಾದದ್ದೆಷ್ಟು ಎಂದು ತಿಳಿಯುತ್ತದೆ. ಆಧುನೀಕರಣ-ಜಾಗತೀಕರಣದ ಬಿರುಗಾಳಿಯಲ್ಲೂ ಹಾಲಕ್ಕಿಯಂತಹ ಸಮುದಾಯಗಳು ತಮ್ಮ ಅನನ್ಯತೆಯನ್ನು ಕಾಪಾಡಿಕೊಂಡೇ ಹೇಗೆ ಬದಲಾವಣೆಗೆ ತೆರೆದುಕೊಳ್ಳುತ್ತವೆ ಎನ್ನುವುದು ಕಾದುನೋಡಬೇಕಾದ ಸಂಗತಿಯಾಗಿದೆ.




# ನನ್ನ ಕೊಲೆಗಾರ

ಯಾವ ಗೋರಿಯಲಿ ಯಾರ ಶವವಿದೆ
ಏನು ಹೆಸರು ನನಗೇನು ಗೊತ್ತು?
ಯಾವ ಚಹರೆ, ಯಾವ ಬಣ್ಣ, ಯಾರಿಗೆ ಗೊತ್ತು?
ಯಾಕೆ ಕೊಲೆಯಾದೆ, ಯಾರು ಕೊಂದರು
ಕೊಲೆಗಾರನ ಹೆಸರು ಗೊತ್ತಿಲ್ಲ ನನಗೆ,
ಗೋರಿಗಳ ನಿಶಾನೆ ಅಳಿಸಿ ಹೋಗುತ್ತಿವೆ
ಹೊದಿಸಿದ ಆ ಚಾದರದ ಮೇಲಿನ ಹೂ
ತುಸುವೇ ಪಕ್ಕಕ್ಕೆ ಸರಿಸಿ ನೋಡಿದೆ
ಅಲ್ಲಿರುವ ರಕ್ತದ ಕಲೆಗಳು ಯಾರವು?
ಯಾರಿಗೆ ಗೊತ್ತು ಕೊಲೆಗಡುಕನ ಹೆಸರು?

* * *

ಆ ಗೋರಿಯ ಬಳಿ ನಿಂತ ಅವರು
ಎರಡೂ ಕೈಗಳ ಮೇಲೆತ್ತಿ ಅಲ್ಲಾಹ್‌ನಲಿ
ಪ್ರಾರ್ಥಿಸುತ್ತಿದ್ದಾರೆ-ದುವಾ ಹೇಳುತ್ತಿದ್ದಾರೆ ನೋಡು
ಅದು ಪುಣ್ಯವಂತರ ಸಮಾಧಿಯಿರಬೇಕು
ಹೊಸ ಚಾದರ ಹೊದಿಸಿದ್ದಾರೆ
ಮಕಮಲ್ಲಿನ ಮೃದು, ಮಲ್ಲಿಗೆ ಸುವಾಸನೆ
ಅತ್ತರು ಸಿಡಿಸಿ, ಊದುಬತ್ತಿ ಹಚ್ಚಿದ್ದಾರೆ
ಕೆತ್ತಿದ ಕುಸುರಿ ಕಲ್ಲು ನೆಟ್ಟಿದ್ದಾರೆ
ಗೋರಿಯ ನಿಶಾನೆ ಹಾಗೇ ಉಳಿದಿದೆ ನೋಡು
ನನ್ನ ಗೋರಿಯ ನಿಶಾನೆ ಅಳಿಸಿ ಹೋಗುತ್ತಿದೆ

* * *

ನನ್ನ ಮುಖವೇ ನನಗೆ ಕಾಣುತ್ತಿಲ್ಲ
ಕಫನ್ನಿನ ಬಟ್ಟೆಯಿಂದ ಮುಚ್ಚಿದ್ದಾರೆ ನೋಡು
ನನ್ನ ಕೊಲೆಗಾರ ಗೋರಿ ಗಿಡುಗನೇ
ನಿನ್ನ ಪಾಪದ ಕೃತ್ಯಗಳನ್ನು
ನನ್ನ ಚಾದರಕ್ಕೆ ತಗುಲಿದ
ಈ ರಕ್ತ ಕಲೆಗಳೇ ಹೇಳುತ್ತವೆ
ನನ್ನ ಕೊಂದವರು ಯಾರು ಎಂದು.
ನಾನೇಕೆ ಸಾಬೀತು ಪಡಿಸಲಿ ಹೇಳು?

■ ಡಾ. ಕೆ. ಷರೀಫಾ




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*



*(ಹಿಂದಿನ ಸಂಚಿಕೆಯಿಂದ)*

ಸಾಹಿತ್ಯ ರಚನೆಯ ಕಾರ್ಯಕ್ರಮಗಳಿಗೆ ಹೋಗುವ ಬಗ್ಗೆ ನನಗೂ ಮಿಸ್ಟರ್ ಪವಾರ್‌ಗೂ ಮೇಲಿಂದ ಮೇಲೆ ವಾದ-ವಿವಾದಗಳು ನಡೆಯುತ್ತಿದ್ದವು. ನಾವು ಎಷ್ಟೋ ಬಾರಿ ಜೋರಾಗಿ ಜಗಳವಾಡುತ್ತಿದ್ದೆವು. ಮಿಸ್ಟರ್ ಪವಾರ್ 'ಹೋಗಬೇಡ' ಎಂದ ದಿನವೂ, ಕಾರ್ಯಕ್ರಮ ಮುಖ್ಯವಾದುದಾಗಿದ್ದರೆ, ನಾನು ಮಾತು ಮೀರಿ ಹೋಗುತ್ತಿದ್ದುದೂ ಉಂಟು. ಮಿಸ್ಟರ್ ಪವಾರ್ ಬಗ್ಗೆ ಒಂದು ವಿಷಯದಲ್ಲಂತೂ ನನಗೆ ತುಂಬು ಅಭಿಮಾನ. ಏನೆಂದರೆ, ಮಿಸ್ಟರ್ ಪವಾರ್ ನನ್ನನ್ನು ಎಂದೂ ಶಂಕಿಸಲಿಲ್ಲ. ಪುರುಷ ಸಾಹಿತಿ/ಕಾರ್ಯಕರ್ತ/ಮುಖಂಡರ ಜೊತೆಗೆ ಸಾಹಿತ್ಯ, ಚಳವಳಿ ಎಂದು ಹಗಲು-ರಾತ್ರಿ ಓಡಾಡಿದಾಗಲೂ, ನನ್ನ ಬಗ್ಗೆ ಎಂದೂ ಅಸಹ್ಯವಾಗಿ ಮಾತಾಡಲಿಲ್ಲ. ನನ್ನ ಚಾರಿತ್ರ್ಯವನ್ನು ಸಂದೇಹಿಸಲಿಲ್ಲ.

ಮಹಿಳಾ ವಿಮೋಚನಾ ಆಂದೋಲನ ಹಾಗೂ ದಲಿತ ವಿಮೋಚನಾ ಆಂದೋಲನ ಎರಡರಲ್ಲೂ ನಾನು ಸಕ್ರಿಯವಾಗಿ – ನನ್ನ ಮಿತಿಯಲ್ಲಿ –ಭಾಗವಹಿಸಿದೆ. ನನ್ನ ಚಿಂತನೆಯನ್ನು ಹಂಚಿಕೊಂಡೆ. ವಿಷಾದದ ಸಂಗತಿಯೆಂದರೆ, ಎರಡೂ ಆಂದೋಲನಗಳಲ್ಲಿ ನಾನು ಪರಕೀಯಳಾದೆ. ಎರಡೂ ಕಡೆ ನನ್ನನ್ನು ವಿಷಾದ ಆವರಿಸಿತು. ಮಹಿಳಾ ಆಂದೋಲನದಲ್ಲಿ ಮೇಲ್ಜಾತಿ ಮಹಿಳೆಯರ ನೇತೃತ್ವ ಇತ್ತು. ನೀತಿ ನಿರ್ಧಾರಗಳನ್ನು ಅವರೇ ತೆಗೆದುಕೊಳ್ಳುತ್ತಿದ್ದರು; ದಲಿತರ ಪ್ರಶ್ನೆಯ ಬಗ್ಗೆ ಇಲ್ಲಿ ವಿಶೇಷ ಕಾಳಜಿ ಕಾಣುತ್ತಿರಲಿಲ್ಲ. ಇನ್ನು ದಲಿತ ವಿಮೋಚನಾ ಆಂದೋಲನದಲ್ಲಿ ಮೇಲ್ಜಾತಿಯವರ ಬಗ್ಗೆ ದ್ವೇಷ ತುಂಬಿತ್ತು, ಇತರ ಜಾತಿಗಳಲ್ಲಿನ ಶೋಷಿತರ ಹಾಗೂ ದಲಿತ ಮಹಿಳೆಯರ ಬಗ್ಗೆ ಇಲ್ಲಿ ಕಾಳಜಿ ಕಾಣುತ್ತಿರಲಿಲ್ಲ.

ಈ ಹಿನ್ನೆಲೆಯಲ್ಲಿ ನಾವು ಕೆಲವು ದಲಿತ ಮಹಿಳೆಯರು 1993ರಲ್ಲಿ 'ಸ್ತ್ರೀ ಉವಾಚ' ಎಂಬ ಸಂಘಟನೆಯನ್ನು ಪ್ರಾರಂಭಿಸಿದೆವು. ಇದೇ ಹೆಸರಿನಲ್ಲಿ ಪತ್ರಿಕೆಯನ್ನೂ ಪ್ರಕಟಿಸಲಾರಂಭಿಸಿದೆವು. ಬಾಬರಿ ಮಸೀದಿ ಧ್ವಂಸ ನಂತರ ಮೂಡಿದ ಕೋಮುವಾದದ ಸನ್ನಿಯನ್ನು ವಿವರಿಸುವ ಹಾಗೂ ದಲಿತ ಚಳವಳಿಯನ್ನು ವಿಮರ್ಶಿಸುವ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾದವು.

ದಲಿತ ಮಹಿಳಾ ಸಂಘಟನೆಯ ಅಧ್ಯಕ್ಷೆ ಡಾ॥ ಪ್ರಮೀಳಾ ಲೀಲಾ ಸಂಪತ್. 'ಸ್ತ್ರೀ ಮುಕ್ತಿ ಸಂಘಟನೆ'ಯ ಕಚೇರಿಯಲ್ಲಿ 1998ರಲ್ಲಿ ನಡೆಸಿದ ವಿಚಾರ ವಿನಿಮಯ ಕಾರ್ಯಕ್ರಮದಲ್ಲಿ "ಭಾರತೀಯ ಮಹಿಳಾ ವಿಮೋಚನಾ ದಿನ ಮಾರ್ಚ್ 23 ಅಲ್ಲ; ಬದಲಾಗಿ ಬಾಬಾಸಾಹೇಬ್ ಅಂಬೇಡ್ಕರ್‌ರು ಮನುಸ್ಮೃತಿ ಸುಟ್ಟ ದಿನ 25 ಡಿಸೆಂಬರ್ 1927" ಎಂದು ಮಾರ್ಮಿಕವಾಗಿ ನುಡಿದಾಗ, ನನಗೆ ಹೊಸ ದೃಷ್ಟಿಕೋನ ಲಭ್ಯವಾಯಿತು. ಈ ವಿಚಾರವನ್ನು ನೂರಾರು ಮಹಿಳೆಯರೊಂದಿಗೆ ಹಂಚಿಕೊಂಡೆ; ಲತಾ ಪ್ರತಿಭಾ ಮಧುಕರ್, ಕುಂದಾ ಪ್ರಮೀಳಾ ನೀಲಕಂಠ ಮುಂತಾದವರು ನನಗೆ ಈ ಪ್ರಕ್ರಿಯೆಯಲ್ಲಿ ಪರಿಚಯ ವಾದರು. ಇವರಲ್ಲಿ ಹಲವಾರು ಜನ ಹುಟ್ಟಿನಿಂದ ದಲಿತರಾಗಿರಲಿಲ್ಲ; ದಲಿತರ ಭವಿಷ್ಯದ ಬಗ್ಗೆ ಅವರು ಹೊಂದಿದ್ದ ಕಾಳಜಿ, ದಲಿತರಾಗಿ ಹುಟ್ಟಿದ ಅನೇಕರಲ್ಲಿ ನನಗೆ ಕಾಣಲಿಲ್ಲ. ಆದರೂ ಇಂಥವರನ್ನು ದಲಿತ ಚಳವಳಿಯಲ್ಲಿ ಸಂದೇಹದಿಂದ ಕಾಣಲಾಗುತ್ತಿತ್ತೆಂಬುದು ಅಪಾರ ವ್ಯಥೆಯ ಸಂಗತಿ.

ದಲಿತ ಚಳವಳಿಯಲ್ಲಿ ನಾನು ತೊಡಗುತ್ತಾ ಹೋದಂತೆ ಹಲವರು ಅತಿರಥ-ಮಹಾರಥರು ನನಗೆ ಪರಿಚಯವಾಗುತ್ತಾ ಬಂದರು. ಅಂಥವರಲ್ಲಿ ವಸಂತರಾವ್ ಮೂನ್ ಮತ್ತು ಮೀನಾಕ್ಷಿ ಮೂನ್ ದಂಪತಿ. ಫುಲೆ, ಅಂಬೇಡ್ಕರ್‌ವಾದಿ ವಿಚಾರಧಾರೆಯ ಹಲವು ಮಜಲುಗಳನ್ನು ನಾನು ಈ ದಂಪತಿಯಿಂದ ಕಲಿತೆ. ಮಹಾರಾಷ್ಟ್ರ ಸರ್ಕಾರವು ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳನ್ನು ಪ್ರಕಟಿಸಲು ರಚಿಸಿದ್ದ ಸಮಿತಿಗೆ ವಸಂತರಾವ್ ಮೂನ್ ಸದಸ್ಯ ಕಾರ್ಯದರ್ಶಿಯಾಗಿದ್ದರು. ಇವರ ಮನೆಯಲ್ಲೇ ನನಗೆ ಡಾ॥ ಎಲಿನಾರ್ ಝೇಲಟ್ ಎಂಬ ವಿದೇಶಿ ಲೇಖಕಿ ಪರಿಚಯವಾದರು. ಇವರು ದಲಿತರ ಪ್ರಶ್ನೆ ಬಗ್ಗೆ ಹೊಂದಿದ್ದ ಜ್ಞಾನ ಅಪಾರ.

ಒಂದು ಸಲ ಹೀರಾ ಬನಸೋಡೆ ಜೊತೆ ಮಾತನಾಡುತ್ತಿದ್ದಾಗ, 'ನಾವು ಇದುವರೆಗೆ ಅಸ್ಮಿತಾದರ್ಶ, ದಲಿತ, ಬೌದ್ಧ, ಮರಾಠಿ, ಕೊಂಕಣ ಹೀಗೆ ಅನೇಕ ಸಮ್ಮೇಳನಗಳಿಗೆ ಹೋಗಿ ಬಂದಿದ್ದೇವೆ. ಇವುಗಳನ್ನೆಲ್ಲ ಪುರುಷರು ಮುಂದೆ ನಿಂತು ಸಂಘಟಿಸುತ್ತಾರೆ; ನಾವು ಹೋಗಿ ಭಾಗ ವಹಿಸುತ್ತೇವೆ. ಒಂದು ಸಮ್ಮೇಳನವನ್ನು ನಾವೇ ಏಕೆ ಸಂಘಟಿಸಬಾರದು? ಭಾಗವಹಿಸಲು ಪುರುಷರನ್ನು ಏಕೆ ಆಹ್ವಾನಿಸಬಾರದು?' ಎಂದು ಪ್ರಸ್ತಾಪಿಸಿದಳು.

ಇದರಿಂದ ನಮ್ಮ ಕರ್ತೃತ್ವ ಶಕ್ತಿ ಹೆಚ್ಚುತ್ತದೆ ಮತ್ತು ಹೆಚ್ಚು ಮಹಿಳೆಯರನ್ನು ಪ್ರೋತ್ಸಾಹಿಸಿದಂತಾಗುತ್ತದೆ ಎಂದು ಈ ಯೋಜನೆಯನ್ನು ಕೈಗೆತ್ತಿಕೊಂಡೆವು. ವಸಂತರಾವ್ ಮೂನ್ ದಂಪತಿಯಿಂದ ಸಂಪೂರ್ಣ ಸಹಕಾರ ಸಿಕ್ಕಿತು. ವಿದ್ಯಾವಂತ ದಲಿತ ಮಹಿಳೆಯರನ್ನು ಸಂಪರ್ಕಿಸಿದೆವು. ಈ ಕಾಲದಲ್ಲಿ ನಮಗೆ ಅನೇಕ ರೀತಿಯ ಅನುಭವಗಳಾದವು. ದಲಿತ ಮಹಿಳೆಯರಲ್ಲಿ ವೈಚಾರಿಕ ಪ್ರಜ್ಞೆಯ ತೀವ್ರ ಕೊರತೆ ಇರುವುದು ಎದ್ದು ಕಂಡಿತು. 'ಈ ರಗಳೆಯೆಲ್ಲಾ ನಿಮಗೇಕೆ?' ಎಂದವರು ಕೆಲವರಾದರೆ; 'ಚಂದಾ ಎತ್ತಲು ಮತ್ತೊಂದು ಸಂಘಟನೆ ಬಂತು' ಎಂದು ಚುಚ್ಚಿದವರು ಹಲವರು. 'ದಲಿತ ಚಳವಳಿಯಲ್ಲಿ ನೀವು ಯಾರ ಗುಂಪಿನ ಕಡೆ?' ಎಂದು ಕೆಲವರು ಪ್ರಶ್ನಿಸಿದರೆ, 'ನಮ್ಮ ಹುಡುಗರಿಗೆ ನೌಕರಿ ಕೊಡಿಸ್ತೀರಾ?' ಎಂದು ಮತ್ತೆ ಕೆಲವರು ಕೇಳುತ್ತಿದ್ದರು. ಜಾತಿ ಗುರುತಿಸಿ ಮಾತನಾಡಿದ್ದಕ್ಕೆ ಹಲವರು ಮುಖ ಸಿಂಡರಿಸಿ ಆಕ್ಷೇಪಿಸಿದರೆ, ಕೆಲವರು ನಮ್ಮ ಸ್ನೇಹದಿಂದ ಪುಳಕಗೊಂಡದ್ದೂ ಉಂಟು. ಕೆಲವರು ಅತಿ ವಿಚಾರವಂತರು 'ನೀವು ಬೌದ್ಧರು; ನಾವೂ ಬೌದ್ಧರು. ಇನ್ನು 'ದಲಿತ' ಎಂಬ ಪದಬಳಕೆ ಏಕೆ?' ಎಂಬ ಪ್ರಶ್ನೆಯನ್ನೂ ಹಾಕುತ್ತಿದ್ದರು. ಇನ್ನೂ ಕೆಲವರು 'ಏನು ಸಾಹಿತ್ಯವೋ, ಏನು ಸಂಘಟನೆಯೋ; ಚಂದಾ ಸಂಗ್ರಹಿಸಿ ಬಡವರಿಗೆ ದಾನ ಮಾಡಿಬಿಡಿ; ನಿಮ್ಮ ಸಾಹಿತ್ಯವೂ ಬೇಡ, ನಿಮ್ಮ ಸಮ್ಮೇಳನವೂ ಬೇಡ' ಎಂದು ಬಿಡುತ್ತಿದ್ದರು. ಭೌತಿಕ ಅನುಕೂಲತೆಗಳನ್ನು ಪಡೆದುಕೊಳ್ಳಲು ಫುಲೆ-ಅಂಬೇಡ್ಕರ್ ತೋರಿದ ಮಾರ್ಗವನ್ನು ಪರಿಚಯಿಸಬೇಕೆಂಬ ನಮ್ಮ ಸರಳ ಉದ್ದೇಶ ಬಹಳ ಜನರಿಗೆ ಅರ್ಥವಾಗಲಿಲ್ಲ. ಇಷ್ಟೆಲ್ಲಾ ಅಡ್ಡಿ ಆತಂಕಗಳನ್ನು ಎದುರಿಸಿಯೂ ಮುಂಬಯಿಯಲ್ಲಿ 1987ರಲ್ಲಿ ಸಮ್ಮೇಳನ ಮಾಡಿ ಮುಗಿಸಿದೆವು. ಇದು ಮಹಾರಾಷ್ಟ್ರದ ದಲಿತ ಮಹಿಳೆಯರ ಮೊದಲನೇ ಸಮ್ಮೇಳನವಾಗಿತ್ತು.

ನನ್ನ ಒಂದು ಕಥೆ SNDT ವಿಶ್ವವಿದ್ಯಾಲಯ ವ್ಯಾಪ್ತಿಯ ಕಾಲೇಜುಗಳ ಬಿ.ಎ. ತರಗತಿಗೆ ಪಠ್ಯ ಪುಸ್ತಕದಲ್ಲಿ ಸೇರಿತು. ದಲಿತ ಶ್ರಮಜೀವಿ ಬದುಕಿನ ಹಿನ್ನೆಲೆಯ ಕಥೆ ಅದು. ಆದರೆ ಅದರಲ್ಲಿ ಅಶ್ಲೀಲ

ಚಿತ್ರಣವಿದೆ ಎಂಬ ಕಾರಣ ನೀಡಿ ಪಠ್ಯ ಪುಸ್ತಕವನ್ನು ಹಿಂತೆಗೆದುಕೊಳ್ಳಲಾಯಿತು.

ವಾಸ್ತವದಲ್ಲಿ ಅದರಲ್ಲಿ ಉದ್ರೇಕಕಾರಿ ದೃಶ್ಯಗಳಿರಲಿಲ್ಲ. ದಲಿತ ಶ್ರಮಜೀವಿ ವರ್ಗದ ಮಹಿಳೆಯರನ್ನು ಜಾತಿ-ವರ್ಗ-ಅಧಿಕಾರ-ಅಂತಸ್ತು-ಪುರುಷಪ್ರಾಧಾನ್ಯ ಇರುವ ಸಮಾಜ ಹೇಗೆ ಕಾಣುತ್ತದೆ ಎಂಬುದರ ಚಿತ್ರಣ ಅಲ್ಲಿತ್ತು. ಕಡೆಯಲ್ಲಿ ಶೋಷಿತ ದಲಿತ ಮಹಿಳೆ ಶೋಷಕ ಸಮಾಜದ ಇಬ್ಬಂದಿ ನೀತಿಯನ್ನು ಕಟಕಟೆಯಲ್ಲಿ ನಿಲ್ಲಿಸಿ, ಛೀಮಾರಿ ಹಾಕಿ ಧಿಕ್ಕರಿಸುವ ಪ್ರಸಂಗ ಇತ್ತು. ಇದೆಲ್ಲವನ್ನೂ ಅರಗಿಸಿಕೊಳ್ಳುವುದು ಪಟ್ಟಭದ್ರ ಸಮಾಜ ವ್ಯವಸ್ಥೆಗೆ ಆಗಲಿಲ್ಲವೇನೋ. ಅಶ್ಲೀಲತೆಯ ಗೂಬೆ ಕೂರಿಸಿ, ಕಥೆಯನ್ನು ಕಿತ್ತುಹಾಕಿ, ಉಳಿದ ಪಠ್ಯವನ್ನು ಅಭ್ಯಾಸಕ್ಕೆ ನಿಗದಿಪಡಿಸಲಾಯಿತು.

ಈ ವಿಚಾರದಲ್ಲಿ ಆಗ ರಾಜ್ಯಾದ್ಯಂತ ವಿವಾದ ಕಾಣಿಸಿತು. ನನಗೆ ಸಮಾಧಾನ ತಂದಿದ್ದೇನೆಂದರೆ, ಪ. ಶ್ರೀ. ನೆರೂರ್‌ಕರ್, ನಿಖಿಲ್ ವಾಗಳೆ, ಮಾಧವ ಗಡಕರಿ ಮುಂತಾದ ಪ್ರಾಜ್ಞರು ನನ್ನ ಕಥೆಯನ್ನು ಎತ್ತಿ ಹಿಡಿದು, ಸರ್ಕಾರಿ ಪಠ್ಯಪುಸ್ತಕ ರಚನಾ ಸಮಿತಿಯ ನಿಲವನ್ನು ಖಂಡಿಸಿದ್ದು. ಇದಾದ ಬಳಿಕ ಸಮಿತಿಗೆ ಜ್ಞಾನೋದಯ ಆಗಿರಬೇಕು; ಮಾರನೇ ವರ್ಷದಿಂದ ಕಥೆಯನ್ನು ಪಠ್ಯದಲ್ಲಿ ಸೇರ್ಪಡೆ ಮಾಡಲಾಯಿತು.

* * *

ಎರಡನೇ ಮರಾಠಿ ವಿಶ್ವ ಸಮ್ಮೇಳನ ಮಾರಿಷಸ್‌ನಲ್ಲಿ ಜರುಗಿತು; ಇದರಲ್ಲಿ ಭಾಗಿಯಗುವ ಅವಕಾಶ ಲಭಿಸಿತು; ಅಲ್ಲಿಗೆ ಹೋಗಿ ಬಂದ ಮೇಲೆ ಪ್ರವಾಸ ಕಥನ ಪ್ರಕಟಿಸಿದೆ. ದೆಹಲಿಯಲ್ಲಿ ನಡೆದ ಮೂರನೇ ವಿಶ್ವ ಮರಾಠಿ ಸಮ್ಮೇಳನದಲ್ಲಿ ಈ ಕೃತಿಯನ್ನು ಮಾರಿಷಸ್ ಸಮಾಜ ಕಲ್ಯಾಣ ಮಂತ್ರಿ ಶೀಲಾಬಾಯ್ ಬಾಪು ಬಿಡುಗಡೆ ಮಾಡಿದರು.

ಒಂದು ಕಡೆ ನನ್ನ ಸಾಹಿತ್ಯ ಕೃಷಿ ಪ್ರಾಜ್ಞರ ಗಮನ ಸೆಳೆಯುತ್ತಿತ್ತು; ಅವರ ಪ್ರಶಂಸೆಗೆ ಪಾತ್ರವಾಗುತ್ತಿತ್ತು. ಬಹುಮಾನ-ಪುರಸ್ಕಾರಗಳು ನನ್ನನ್ನು ಹುಡುಕಿಕೊಂಡು ಬರುತ್ತಿದ್ದವು. ಪಠ್ಯ ಪುಸ್ತಕ ವಿವಾದ ಸಂದರ್ಭದಲ್ಲಿ ಮರಾಠಿ, ಇಂಗ್ಲಿಷ್ ಪತ್ರಿಕೆಗಳು ನನ್ನ ಅಭಿಪ್ರಾಯವನ್ನು ಸಂದರ್ಶನ ಮಾಡಿ ಪ್ರಕಟಿಸಿದವು. ಸಾಹಿತ್ಯ-ಸಂಸ್ಕೃತಿ ಮಂಡಲ, ಅಸ್ಮಿತಾದರ್ಶ ಪುರಸ್ಕಾರಗಳು ನನ್ನ ಮಡಿಲು ಸೇರಿದವು. ನನ್ನ ಪರಿಶ್ರಮವನ್ನು ಗುರುತಿಸಲಾಗಿತ್ತು.

ಆದರೆ ಇನ್ನೊಂದೆಡೆ, ಸಾಂಸಾರಿಕವಾಗಿ ನಾನು ತೀರಾ ಸಂಕಟ ಸ್ಥಿತಿಯತ್ತ ಜಾರುತ್ತಿದ್ದೆ. ಸಂದರ್ಶನ, ಪ್ರಶಸ್ತಿ, ಪುರಸ್ಕಾರ, ಬಹುಮಾನ ಇತ್ಯಾದಿಗಳಿಂದ ಮಿಸ್ಟರ್ ಪವಾರ್ ಹತಪ್ರಭರಾಗಿದ್ದರೆ? ನನಗೆ ಸ್ಪಷ್ಟವಾಗುತ್ತಿರಲಿಲ್ಲ. ಏಕೆಂದರೆ ನನ್ನ ಮತ್ತು ಅವರ ನಡುವೆ ಮಾತುಕತೆ ಕ್ಷೀಣಿಸಿತ್ತು.

ದಲಿತ ಸಾಹಿತ್ಯ ಸಮ್ಮೇಳನಗಳಲ್ಲಿ ಕೊಂಕಣ ಭಾಗದ ಲೇಖಕ-ಲೇಖಕಿಯರು ಹೆಚ್ಚು ಕಾಣುತ್ತಿರಲಿಲ್ಲ. ರಮಾಕಾಂತ ಜಾಧವ್, ಚಂದ್ರಹಾಸ ಗಂಬ್ರೆ, ಪ್ರಕಾಶ್ ಖರಾತ್, ಡಾ॥ ಶಶಿಕಾಂತ ಲೋಖಂಡೆ ಹೀಗೆ ಕೆಲವರು ಮಾತ್ರ ಭಾಗವಹಿಸುತ್ತಿದ್ದರು. ಹಾಗಾಗಿ, ಕೊಂಕಣ ಭಾಗದವರನ್ನು ಸೇರಿಸಿ ಸಾಹಿತ್ಯ ಸಮ್ಮೇಳನ ಏರ್ಪಡಿಸುವ ವಿಚಾರ ಬಂತು. ನಾಲ್ಕಾರು ಜನರ ಜೊತೆ ಮಾತಾಡಿ 1991ರಲ್ಲಿ ಸಮ್ಮೇಳನವನ್ನು ಸಂಘಟಿಸಿದೆವು. ಡಾ॥ ಭಾಲಚಂದ್ರ ಮುಣಗೇಕರ್, ಶಾಂತಾರಾಂ ನಂದಗಾಂವಕರ್, ರಾಜಾ ಜಾಧವ್, ಚಿತ್ರಕಲಾವಿದ ಕೃಷ್ಣಾ ವರ್ದೆ ಮುಂತಾದವರು ಪಾಲ್ಗೊಂಡರು. 'ಡಾ॥ ಅಂಬೇಡ್ಕರ್ ಕೊಂಕಣ ಕಲೆ ಮತ್ತು ಸಾಹಿತ್ಯ ಅಭಿಯಾನ' ಹೆಸರಿನ ಈ ಸಮ್ಮೇಳನ, 1992ರ ಜನವರಿ 5ರಂದು ಮುಂಬೈನ ಶಿರೋಡಕರ್ ಹಾಲ್‌ನಲ್ಲಿ ನಡೆದಾಗ 500ಕ್ಕಿಂತ ಹೆಚ್ಚು ಜನ ಭಾಗವಹಿಸಿದರು.

* * *

ಎಂ.ಎ. ಮುಗಿದ ಮೇಲೆ ಪಿಹೆಚ್.ಡಿ ಮಾಡುವ ವಿಚಾರ ಆಗಾಗ ದಾಳಿ ಮಾಡುತ್ತಲೇ ಇತ್ತು. ದಲಿತ ಮಹಿಳೆಯರ ಬಗ್ಗೆ ಮನಸ್ಸು ಮೇಲಿಂದ ಮೇಲೆ ಚಿಂತಿಸುತ್ತಿತ್ತು. ಅಂಬೇಡ್ಕರ್‌ರ ಜೀವನ-ಸಾಧನೆ ಕುರಿತ ಅನೇಕ ಪುಸ್ತಕಗಳನ್ನು ಓದಿದ್ದೆ; ಅವರು ದಲಿತ ಮಹಿಳೆಯರ ಬಗ್ಗೆ ತೋರಿದ್ದ ಕಾಳಜಿ ಮನದಟ್ಟಾಗಿತ್ತು. ಆದರೆ ಅವರ ಕಾಲದಲ್ಲಿ ಕ್ರಿಯಾಶೀಲರಾಗಿದ್ದ ಮಹಿಳೆಯರು ಈಗ ಯಾರಾದರೂ ಇರಬಹುದೆ? ಇದ್ದರೆ ಅವರ ಅನುಭವ ಮತ್ತು ಆಶೋತ್ತರಗಳನ್ನು ದಾಖಲಿಸಬಹುದಲ್ಲ ಎಂಬ ವಿಚಾರ ಬಂದು, ಈ ವಿಷಯದ ಮೇಲೆ ಪಿಹೆಚ್.ಡಿ ಮಾಡುವುದೆಂದು ನಿರ್ಣಯಿಸಿದೆ. ಈ ವಿಷಯವನ್ನು ಛಾಯಾ ದಾತಾರ್ ಜೊತೆ ಚರ್ಚಿಸಿದಾಗ, ಪ್ರೋತ್ಸಾಹ ದೊರಕಿತು. ಆದರೆ ಅನೇಕ ಜನ 'ಆಗ ದಲಿತ ಮಹಿಳೆಯರು ಎಲ್ಲಿ ಚಳವಳಿಯಲ್ಲಿ ಭಾಗವಹಿಸುತ್ತಿದ್ದರು ಬಿಡಿ' ಎಂದು ನನ್ನ ಉತ್ಸಾಹಕ್ಕೆ ನೀರೆರಚುವ ಕೆಲಸವನ್ನೂ ಮಾಡಿದರು. ಇನ್ನೂ ಕೆಲವರು ತಮಗೆ ಪರಿಚಯವಿದ್ದ, ತಾವು ಕೇಳಿದ್ದ ದಲಿತ ಮಹಿಳೆಯರ ಬಗ್ಗೆ ಮಾಹಿತಿ ನೀಡಿ, ಉತ್ತೇಜನ ನೀಡಿದರು. ಮೀನಾಕ್ಷಿ ಮೂನ್ ಜೊತೆ ಮಾಡಿಕೊಂಡು, ವಸಂತರಾವ್‌ಮೂನ್ ಸಲಹೆ-ಮಾರ್ಗದರ್ಶನ ಪಡೆದು ಸಂಶೋಧನೆಗೆ ತೊಡಗಿದೆ. ಅಂಬೇಡ್ಕರ್ ಜೊತೆ ಕೆಲಸ ಮಾಡಿದ ದಲಿತ ಮಹಿಳೆಯರ ಅನುಭವಗಳನ್ನು ದಾಖಲಿಸಿದೆವು.

ಕೆಲವು ದಲಿತಮಹಿಳೆಯರು ತಮ್ಮ ಮನೆಯಲ್ಲಿ ಪುರುಷರ ಬೆಂಬಲ, ಪ್ರೋತ್ಸಾಹಗಳನ್ನು ಪಡೆದು ಅಂಬೇಡ್ಕರ್‌ರ ಚಳವಳಿಯಲ್ಲಿ ಭಾಗ ವಹಿಸಿದ್ದರು; ಇನ್ನೂ ಕೆಲವರು ಮನೆಯಲ್ಲಿ ಪುರುಷರ ಪ್ರೋತ್ಸಾಹ ವಿಲ್ಲದೆಯೂ ಭಾಗವಹಿಸಿದ್ದರು. ನಾಗಪುರದಲ್ಲಿ ನಾವು ಸಂದರ್ಶಿಸಿದ ಚಂದ್ರಿಕಾ ರಾಮಟೇಕೆ ಅನುಭವ ಅದ್ಭುತವಾದುದು. ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿದ್ದ ಈಕೆ, ಗಂಡ-ಮಾವ-ಅತ್ತೆಯರ ಅನುಮತಿ ಇಲ್ಲದಾಗ್ಯೂ ಮಹಾಡ್ ಕೆರೆ ಸತ್ಯಾಗ್ರಹದಲ್ಲಿ ಪಾಲ್ಗೊಂಡ ರೋಚಕ ಗಾಥೆಯನ್ನು ಬಿಡಿಸಿ ಹೇಳಿದರು.

'ಬಾಬಾಸಾಹೇಬ ಅಂಬೇಡ್ಕರ್ ಇದ್ದಾಗಲೇ ಅಷ್ಟೊಂದು ಕ್ರಿಯಾಶೀಲರಾಗಿದ್ದ ನೀವು ಅನಂತರ -ವಿಶೇಷವಾಗಿ ಬಾಬಾ ನಿಧನ ರಾದ ಬಳಿಕ ಸಕ್ರಿಯರಾಗಲಿಲ್ಲವೆ? ಏಕೆ ಮೂಲೆಗೆ ಸರಿದಿರಿ?' ಎಂದು ಚಂದ್ರಿಕಾ ಅಜ್ಜಿಗೆ ಕೇಳಿದ್ದೆ. ಚಂದ್ರಿಕಾ ಅಜ್ಜಿ ಕೂಡ ಮೊದಲು ಉತ್ತರಿಸಲಿಲ್ಲ. ಒತ್ತಾಯ ಮಾಡಿದ ಮೇಲೆ "ಬಾಬಾ ಅವರ ನಂತರ ಜನಾಂಗದ ಪರವಾಗಿ ಪ್ರಾಮಾಣಿಕ ನಿಷ್ಠೆ ಇರುವವರು ಎಲ್ಲಿ ಬಂದರು? ಎಲ್ಲರದೂ ಒಂದಲ್ಲ ಒಂದು ಸ್ವಾರ್ಥ, ಎಲ್ಲರಿಗೂ ಅಧಿಕಾರದಾಸೆ ... ..." ಎಂದವರೇ ಮರುಕ್ಷಣ, "ಗಂಡನನ್ನು ಬೇಗ ಕಳೆದುಕೊಂಡೆ. ಇದ್ದ ಒಬ್ಬನೇ ಮಗ ತನ್ನ 26ನೇ ವಯಸ್ಸಿನಲ್ಲಿ ಆಕಸ್ಮಿಕವಾಗಿ ಇಲ್ಲವಾದ. ನನ್ನ ಜೀವನದ ಉದ್ದೇಶವೇ ನಾಶವಾಯಿತು. ಸಾಯುವವರೆಗೆ ಜೀವ ಹಿಡಿದಿರುವುದಷ್ಟೇ ಈಗಿನ ಕೆಲಸ. ನನ್ನ ಆಯುಷ್ಯ ಮುಗಿಯುವುದನ್ನು ನಿರೀಕ್ಷಿಸುತ್ತಿದ್ದೇನೆ..." ಎಂದಾಗ ಆಕೆಯ ದೃಷ್ಟಿ ಶೂನ್ಯದಲ್ಲಿ ಲೀನವಾಗಿತ್ತು.

ಈ ಸಂದರ್ಶನವನ್ನು ಮುದ್ರಣಕ್ಕೆ ಸಿದ್ಧಪಡಿಸುತ್ತಿದ್ದಾಗ, ಚಂದ್ರಿಕಾ ಅಜ್ಜಿಗೆ ಪತ್ರ ಬರೆದು "ನಿಮ್ಮ ಅನುಭವ ದೊಡ್ಡದು; ನಿಮ್ಮ ಕಾಳಜಿ ಮುಖ್ಯವಾದುದು. ಬಾಬಾಸಾಹೇಬರ ಜೊತೆಯಲ್ಲಿ ಕೆಲಸ ಮಾಡಿದ ಹಿರಿಮೆ ನಿಮ್ಮದು. ನಿಮ್ಮ ಮಾರ್ಗದರ್ಶನ ಎಲ್ಲರಿಗೂ ಸಿಗಬೇಕು... ..." ಎಂದು ಏನೇನನ್ನೋ ಬರೆದಿದ್ದೆ.

ಆದರೆ ಕೆಲವೇ ತಿಂಗಳುಗಳ ನಂತರ ಚಂದ್ರಿಕಾ ಅಜ್ಜಿಯ ಸ್ಥಿತಿ ನನಗೇ ಬರಲಿದೆ ಎನ್ನುವುದನ್ನು ನಾನಾಗ ಎಣಿಸಿರಲಿಲ್ಲ.

* * *

ಆ ದಿನ ಸಂಜೆ ಆಫೀಸಿನಿಂದ ಬರುವಾಗ ರಾತ್ರಿ-ಬೆಳಗಿನ ಊಟ ಉಪಾಹಾರಕ್ಕೆ ಬೇಕಾದ ತರಕಾರಿ ಹೊತ್ತುಕೊಂಡು ಮನಗೆ ಬಂದೆ. ಮಿಸ್ಟರ್ ಪವಾರ್ ಆಗಲೇ ಮನೆಗೆ ಬಂದಿದ್ದರು. ಹಿರಿಮಗಳು ರಾತ್ರಿ ಅಡುಗೆಗೆ ಕುಕ್ಕರ್ ಇಟ್ಟಿದ್ದಳು. (ಕೆಲವು ವರ್ಷಗಳಿಂದ ಕೆಲಸದವರು

ಯಾರೂ ಇರಲಿಲ್ಲ.) ಚಿಕ್ಕ ಮಗಳು ಓದಿಕೊಳ್ಳುತ್ತಿದ್ದಳು. ಅರ್ಧ-ಮುಕ್ಕಾಲು ಗಂಟೆಯಲ್ಲಿ ಅಡುಗೆ ಸಿದ್ಧವಾಯಿತು. ತಟ್ಟೆಗೆ ಬಡಿಸಿ ಮಿಸ್ಟರ್ ಪವಾರ್ ಕೈಗೆ ಕೊಟ್ಟೆ. ಅವರು ಒಂದೆರಡು ತುತ್ತು ಊಟ ಮಾಡಿರಬಹುದು; ಬಾಗಿಲು ತಟ್ಟಿದ ಶಬ್ದವಾಯಿತು; ತೆಗೆದರೆ ಪೊಲೀಸ್ ಪೇದೆ ನಿಂತಿದ್ದ. ಗಾಬರಿಯಾಗಿ, ಊಟದ ತಟ್ಟೆ ಅಲ್ಲೇ ಬಿಟ್ಟು, ಮಿಸ್ಟರ್ ಪವಾರ್ ಹೊರಗೆ ಹೋಗಿ ವಿಚಾರಿಸಿದವರು, ಇದ್ದಕ್ಕಿದ್ದ ಹಾಗೆ ಕಿರುಚಿದರು. ನಮಗೂ ಹೃದಯ ನಡುಗಿತು. ಎಲ್ಲರೂ ಹೊರಗೆ ಓಡಿದೆವು. ಮಗ ರೈಲು ಅಪಘಾತದಲ್ಲಿ ನಿಧನ ಹೊಂದಿದ ಸುದ್ದಿಯನ್ನು ಪೊಲೀಸ್ ಪೇದೆ ತಿಳಿಸಿದ. ಕಣ್ಣಿಗೆ ಕತ್ತಲು ಕವಿಯಿತು.

14-15 ವರ್ಷದ ಹುಡುಗ. ಉತ್ಸಾಹದಿಂದ ಓಡಾಡುತ್ತಿದ್ದವ. ಮಿಸ್ಟರ್ ಪವಾರ್-ನಾನು ಜಗಳವಾಡಿದಾಗ ಈ ಹುಡುಗ ನಮಗೆ ಬುದ್ಧಿ ಹೇಳುತ್ತಿದ್ದ.

ಮಾತುಗಳು ಹೊರಡುತ್ತಿರಲಿಲ್ಲ. ಮಿಸ್ಟರ್ ಪವಾರ್ ಸೇರಿದಂತೆ ಯಾರ ಸಾಂತ್ವನವೂ ಬೇಡವಾಗಿತ್ತು. ಇಬ್ಬರೂ ಹೆಣ್ಣು ಮಕ್ಕಳತ್ತ ಆರ್ತ ನೋಟ ಬೀರುವುದಷ್ಟೇ ಸಾಧ್ಯವಾಗಿತ್ತು. ಹೃದಯ ಉರಿಯುತ್ತಿದ್ದಂತೆ, ಮನಸ್ಸು ಘಾಸಿಗೊಂಡಂತೆ ಭಾಸವಾಗುತ್ತಿತ್ತು. ಕಷ್ಟಪಟ್ಟು ನನ್ನ ಮನಸ್ಸನ್ನು ಬೇರೆಕಡೆ ಹರಿಸಲು ಹರಸಾಹಸ ನಡೆಸಿದೆ.

ಹತ್ತಾರು ಕ್ಷಣಗಳ ಬಳಿಕ ಮನಸ್ಸು ಹರಿದುದು ಗೌತಮಿಯ ಕಡೆಗೆ. ಅದೇ ಕಿಸಾ ಗೌತಮಿ. ತನ್ನ ಮಗನ ಸಾವಿನಿಂದ ವ್ಯಾಕುಲಗೊಂಡ ತಾಯಿ; ಬುದ್ಧನಲ್ಲಿ ಪುತ್ರನ ಪ್ರಾಣಭಿಕ್ಷೆ ಬೇಡಿದಾಕೆ. ಬುದ್ಧ ಪೂರ್ಣ ಸಹಾನುಭೂತಿಯಿಂದ ಅತೀವ ತಣ್ಣಗಿನ ದನಿಯಲ್ಲಿ ಗೌತಮಿಗೆ ಕಠೋರ ಸತ್ಯವನ್ನು ಮನಗಾಣಿಸಿದ ಪರಿ. ಭಂತೆ ಜಗದೀಶ್ ಕಾಶ್ಯಪರು ಮರಾಠಿಗೆ ಅನುವಾದಿಸಿದ್ದ ಬುದ್ಧನ ಸಾಂತ್ವನದ ನುಡಿಗಳು.

* * *

ಈ ನೆನಪನ್ನು ಭೇದಿಸಿಕೊಂಡು ಬಂತು ಅಣ್ಣ ಶಾಹುನ ಸಾವು. ಏನಾಗಿರಬಹುದು ಅವನಿಗೆ? ಶಾಹು ಕಂದಾಯ ಇಲಾಖೆಯಲ್ಲಿ ನೌಕರ. ತನಗೂ-ತನ್ನ ಆಫೀಸರ್‌ಗೂ ವಾದ-ವಿವಾದ ನಡೆಯುತ್ತಿರುವುದನ್ನು ಹೇಳುತ್ತಿದ್ದ. ಬಾಬಾಸಾಹೇಬರ ಅನುಯಾಯಿಯಾಗಿ, ಬೌದ್ಧ ಧರ್ಮೀಯನಾಗಿ ಕರ್ತವ್ಯಲೋಪ ಎಸಗಲು ಸಿದ್ಧನಿರದ ನಿಷ್ಠುರಿ. ಅಧಿಕಾರಿಯೊಂದಿಗಿನ ಜಗಳಕ್ಕೆ ಈ ನಿಷ್ಠುರತೆಯೇ ಕಾರಣ.

ಇದು ವಿಕೋಪಕ್ಕೆ ಹೋಗಿದ್ದು, ಆ ಅಧಿಕಾರಿ ನಕಲಿ ವ್ಯವಹಾರ ಸೃಷ್ಟಿಸಿದ. ಕೆರಳಿದ ಶಾಹು ಅಧಿಕಾರಿಯನ್ನು ಧಿಕ್ಕರಿಸಿದ. ನಕಲಿ ಅವ್ಯವಹಾರವನ್ನೇ ಬಯಲುಗೊಳಿಸುವುದಾಗಿ ಸಿಡಿದು ನಿಂತ. ತನ್ನ ಬಣ್ಣ ಬಯಲಾಗುವ ಭೀತಿಯಿಂದ ಅಧಿಕಾರಿಯೇ ಶಾಹು ಬಗ್ಗೆ ಆರೋಪ ಮಾಡಿ, ವಿಚಾರಣೆಗೆ ಗುರಿಪಡಿಸಿ ಸಾರ್ವಜನಿಕವಾಗಿ -ತಾತ್ಕಾಲಿಕವಾಗಿ ಯಾದರೂ ಸರಿಯೆ -ಶಾಹುನ ಕೈಗೆ ಅಮಾನತ್ ಆದೇಶ ನೀಡಿದಾಗ, ಶಾಹು ಕುಸಿದು ಹೋದ.

ಆತ ಆ ದಿನ ಸಂಜೆ ಮನೆಗೆ ಬರಲೇ ಇಲ್ಲ. ಆತನ ಸಾವಿನ ಸುದ್ದಿ ಮನೆಗೆ ಬಂತು. ಅಣ್ಣ ಶಾಹು ತೀರಿಕೊಂಡಾಗ ಅಮ್ಮ ಎದೆ ಬಡಿದುಕೊಂಡು 'ನನ್ನ ಮಗನನ್ನು ಒಯ್ಯುವ ಬದಲು ನನ್ನನ್ನಾದರೂ ದೇವರು ಒಯ್ಯಬಾರದಿತ್ತೇ' ಎಂದು ಹಲುಬುತ್ತಿದ್ದ ನೆನಪು ಮರುಕಳಿಸಿತು. ಅಣ್ಣ ನಿಧನವಾಗಿದ್ದು 22 ವರ್ಷಗಳ ಹಿಂದೆ. ಅಮ್ಮನಿಗಾದ ವೇದನೆ ಆ ಪ್ರಮಾಣದಲ್ಲಿ ನನಗೂ ಆಗ ಆಗಿತ್ತೆಂದು ಖಚಿತವಾಗಿ ಹೇಳುವುದು ಕಷ್ಟ. ಆದರೆ ಈಗ ನನಗೆ ಮಗನ ಸಾವು ಎಂಥ ಹೃದಯ ವಿದ್ರಾವಕ ಯಾತನೆಯನ್ನು ಉಂಟು ಮಾಡುತ್ತದೆ ಎಂಬುದು ಅನುಭವಕ್ಕೆ ಬಂದಿತ್ತು.

* * *

ನನ್ನ ಮಗನಿಗೆ ಏನಾಯಿತು? ಯಾರು ಹೇಳಬೇಕು ನನಗೆ? ಎಲ್ಲರೂ ಈ ಪ್ರಶ್ನೆಯ ಉತ್ತರಕ್ಕಾಗಿ ಕಾಯುತ್ತಿದ್ದೆವು. ಕೆಲವು ದಿನಗಳ ಹಿಂದೆ ಮಗ ಮಾತಾಡಿದ್ದನ್ನು ನೆನಪಿಸಿಕೊಂಡೆ. ಕಾಲೇಜು ದೂರವೆಂದು, ಕಾಲೇಜಿನ ಹಾಸ್ಟೆಲ್ ಸೇರಿಸಿದ್ದೆವು. ಮೊದಲು ಉತ್ಸಾಹದಿಂದ ಇದ್ದವನು ಒಂದೆರಡು ವಾರಗಳಲ್ಲಿ ಮಂಕಾಗತೊಡಗಿದ. ನಂತರ 'ನನಗೆ ಹಾಸ್ಟೆಲ್ಲೂ ಬೇಡ, ಕಾಲೇಜೂ ಬೇಡ; ಬೇರೆ ಕಾಲೇಜು ಸೇರುತ್ತೇನೆ' ಎಂದಾಗ, ಮಿಸ್ಟರ್ ಪವಾರ್ ಹಾರಾಡಿದರು. ನಾನು ಮಾತ್ರ ಆ ದಿನ ರಾತ್ರಿ ಊಟವಾದ ಬಳಿಕ ಹತ್ತಿರ ಕರೆದು, ತಲೆ ಕೂದಲಲ್ಲಿ ಬೆರಳಾಡಿಸುತ್ತಾ "ಯಾಕೆ ಮಗನೆ, ಹಾಗೆ ಹೇಳ್ತೀಯಾ?" ಎಂದೆ. 'ಬೇರೆ ಕಾಲೇಜು ಸೇರುವುದು ಈಗ ಕಷ್ಟ ಅಲ್ವಾ ಅಮ್ಮ?' ಎಂದು ಪ್ರಶ್ನಿಸಿದ. 'ಕಷ್ಟವೋ, ಸುಖವೋ ಅದು ಹಾಗಿರಲಿ; ನೀನು ಹೀಗೆ ಹೇಳ್ತಿರೋದು ಏಕೆ? ಅದನ್ನು ಮೊದಲು ಹೇಳು' ಎಂದೆ. ಆದರೂ ಅವನು ಬಾಯಿ ಬಿಡಲಿಲ್ಲ. ಆ ದಿನ ರಾತ್ರಿ ಅವನ ಪಕ್ಕದಲ್ಲೇ ಮಲಗಿದೆ. ಬೆಳಿಗ್ಗೆ ಎದ್ದು ಬಿಸಿ ಹಾಲು ಕೊಡುವಾಗಲೂ ಕೇಳಿದೆ; ಅವನು 'ಇರಲಿ ಬಿಡಮ್ಮ, ಅಡ್‌ಜಸ್ಟ್ ಮಾಡ್ಕೋತೀನಿ. ನಿಮಗೆ ವೃಥಾ ತೊಂದರೆ ಏಕೆ?" ಎಂದುಬಿಟ್ಟ. ಬೆಳಗಿನ ಕೆಲಸ ಕೈತುಂಬಾ ಇದ್ದುದರಿಂದ ನಾನೂ ಈ ಬಗ್ಗೆ ಹೆಚ್ಚು ಮಾತಾಡಲಿಕ್ಕಾಗಲಿಲ್ಲ.

ಆದರೆ ಮಿಸ್ಟರ್ ಪವಾರ್ ಎದ್ದು ಬ್ರಷ್ ಮಾಡಿ ಚಹಾ ಕುಡಿಯುವ ಹೊತ್ತಿಗೆ, ವಾಕ್ ಹೋಗಿಬಂದ ಮಗನ ಮುಖ ಕಂಡು ರೇಗಾಡ ತೊಡಗಿದರು. "ಕಾಲೇಜ್ ಬದಲಾಯಿಸು; ಹಾಸ್ಟೆಲ್ ಬದಲಾಯಿಸು ಎಂದರೆ ಕಟ್ಟಿದ ದುಡ್ಡೆಲ್ಲ ದಂಡವಾಗುತ್ತೆ. ಹೊಸ ಕಾಲೇಜ್-ಹಾಸ್ಟೆಲ್‌ಗೆ ಮತ್ತೆ ದುಡ್ಡು ಕಟ್‌ಬೇಕು. ದುಡ್ಡೇನು ಬೀದಿಯಲ್ಲಿ ಬಿದ್ದಿರುವ ಕಲ್ಲುಗಳ ಥರ ಅಂದ್ಕೊಂಡಿದ್ದೀಯೇನು? ಚೂರಾದ್ರೂ ಜವಾಬ್ದಾರಿ ಇಲ್ಲ..." ಎಂದು ಹೇಳತೊಡಗಿದರು. "ಅಪ್ಪ ನಿನ್ನೆ ಹೇಳಿದ ವಿಚಾರ ಈಗ ಬಿಟ್ಟಿದೀನಿ; ಈ ವರ್ಷ ಅಡ್‌ಜಸ್ಟ್ ಮಾಡಿಕೊಂಡಿರ್‍ತೀನಿ..." ಎನ್ನುತ್ತಿದ್ದರೂ ಮಿಸ್ಟರ್ ಪವಾರ್ ಸಿಟ್ಟು ಇಳಿಯಲಿಲ್ಲ. ತಮ್ಮ ಎಂದಿನ ಶೈಲಿಯಲ್ಲಿ ಅವರು 'ನಿನ್ನೆ ಹಾಸ್ಟೆಲ್-ಕಾಲೇಜ್ ಬಿಡೋ ಮಾತಾಡೋದು, ಇವತ್ತು ಅಡ್‌ಜಸ್ಟ್ ಮಾಡ್ಕೊಳ್ಳೋ ದೊಡ್ ಮಾತು ಆಡೋದು; ಜವಾಬ್ದಾರಿ ಬೇಡವಾ?..." ಎಂದು ಮುಂದುವರೆಸಿದರು.

ನಾನು ಅಡುಗೆ ಮನೆಯಿಂದ ಹೊರ ಬಂದು "ಆ ವಿಷಯಾನ ಅಲ್ಲಿಗೇ ಬಿಟ್ಟಿರುವುದಾಗಿ ಹೇಳಿದನಲ್ಲ; ನೀವೂ ಅದನ್ನ ಅಲ್ಲಿಗೇ ಬಿಟ್ ಬಿಡ್ರಿ" ಎಂದೆ. ಮಿಸ್ಟರ್ ಪವಾರ್ ನನ್ನ ಮೇಲೂ ರೇಗಿದರು. "ನೀನು ಮನೆ ಬಗ್ಗೆ ಜವಾಬ್ದಾರಿಯಿಂದ ಇದ್ದಿದ್ರೆ ಅವರಿಗೂ, ಇಬ್ಬರು ಹೆಣ್ಣು ಮಕ್ಕಳಿಗೂ ಜವಾಬ್ದಾರಿ ಬರ್‍ತಿತ್ತು; ನೀನೇ ಸರಿಯಿಲ್ಲ; ಇನ್ನು ಮಕ್ಕಳು ಸರಿ ಇರೋಕೆ ಎಲ್ಲಿ ಸಾಧ್ಯ?" ಎಂದು ಕುಟುಕಿದರು.

*(ಮುಂದುವರಿಯುವುದು)*

## ▌ಮಾನಸ ವೇದಿಕೆಯ ಆಹ್ವಾನ▐

ಚರ್ಚೆ, ವಿಚಾರ ವಿನಿಮಯ, ಆತ್ಮೀಯರ ಭೇಟಿ ಮಾನಸ ಪತ್ರಿಕೆಯ ಬಗ್ಗೆ ಸಲಹೆ ಸೂಚನೆ, ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಯೋಜನೆ, ಕೊಂಚ ಹರಟೆ, ಕೊಂಚ ಕ್ಯಾಂಟೀನ್ ಕಾಫಿಗಾಗಿ ಪ್ರತಿ ತಿಂಗಳೂ ಎರಡನೇ ಶುಕ್ರವಾರ (ನಿಮ್ಮ ಕೋರಿಕೆಯಂತೆ ವಾರ ಬದಲಾಗಿದೆ) ಸಂಜೆ 5.30 ಗಂಟೆಗೆ ಆಸಕ್ತರೆಲ್ಲರೂ ಸೇರೋಣ. ರವೀಂದ್ರ ಕಲಾಕ್ಷೇತ್ರದ ಸಂಸ ಬಯಲು ರಂಗಮಂದಿರದ ಮೆಟ್ಟಿಲುಗಳಿಗೂ ಮಾನಸ ವೇದಿಕೆಗೂ ಒಂದು ಅವಿನಾಭಾವ ಸಂಬಂಧವಿದೆ. ಮಹಿಳಾ ಧ್ವನಿಗಾಗಿ ಸಾರ್ವಜನಿಕ ಸ್ಥಳವನ್ನು ಉಪಯೋಗಿಸುವುದರ ಹಿಂದೆ ಸ್ತ್ರೀವಾದದ ಪರಿಕಲ್ಪನೆಯೂ ಇದೆ. ಈ ಸಂಬಂಧವನ್ನು ಮತ್ತಷ್ಟು ಗಟ್ಟಿಗೊಳಿಸಲು **ನವಂಬರ್ 11 ಶುಕ್ರವಾರ ಸಂಜೆ** ನೀವು ಬನ್ನಿ. ನಿಮ್ಮ ಗೆಳತಿಯರನ್ನೂ ಕರೆತನ್ನಿ.

*-ಮಾನಸ ವೇದಿಕೆ*

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2010-12



# ನಾನು ಮತ್ತು ಗಂಡು

ನನ್ನ ಕಣ್ಣ ಬಿಂದಿಗೆಯ ತುಂಬಿರುವ
ಕನಸುಗಳು ನೂರು
ಎಲ್ಲ ಕನಸಿಗೂ ಕೂಡ ನಾನಲ್ಲ
ಅವ ಹಕ್ಕುದಾರ

ಹನಿಯ ಬಸಿಯುವುದು ಪರಿಹಾರವಲ್ಲ
ನಾನು ಧನಿಯಾಗಲು
ಸಮಾಧಾನಕ್ಕೆ ನನ್ನ ಮುಂದಿವೆ
ಉದಾಹರಣೆಗಳು

ತಾರೆ ತೋಟದಿ ದೊರೆಯಾಗಿ ಮೆರೆದಿದೆ
ಗರಿಮರೆಯ ಚಂದ್ರ
ಸಣ್ಣಗಾಳಿಗೂ ಸುಮ್ಮನೆ ಹೆದರಿದೆ
ಕಿರುಉರಿಯ ಲಾಂದ್ರ

ಕೊಳ್ಳೆ ಹೊಡೆದಂತೆ ಹೆಚ್ಚಿಸುತ ಹರವ
ಗರುಡ ಹಾರುತಿದೆ
ನೀಲಿ ಮುಗಿಲ ಮುದ್ದಲೆಳೆಸುವ ಪಟವ
ದಾರವು ಹಿಡಿದಿದೆ

ಗರ್ಭವ ಸುಳಿಯಲಿ ಧರಿಸಿದ ತಪ್ಪಿಗೆ
ಫಲದೊಡನೆ ಸಾವು
ಸಂದುಸಂದಿಸಲು ಬೇರಿರುವ ಮರಕೆ
ಮತ್ತೆ ಜೀವಿತವು!

ಹೆಣ್ಣಾಗಿ ಏಕೆ ಹುಟ್ಟಿದೆ ಎಂಬುದು
ನನ್ನೊಡಲ ಕೊರಗು
ಹಸಿನೆತ್ತರಿಯ ಮೇಲೆ ಹದ್ದಿನ ಕಣ್ಣು
ಕಾಯುವುದೆ ಸೆರಗು?

■ ವಿದ್ಯಾ ಹೆಚ್.ಜಿ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018